CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜನವರಿ ೧೫, ೨೦೦೪ (ಪುಷ್ಯ ೨೫, ಶಕ ವರ್ಷ ೧೯೨೫) | ಸಂಚಿಕೆ ೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆಕುಕ 279 ಎಂಎಸ್‌ಎಸ್ 2003 ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2003**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸಹ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ: 1.1.2003 ರಲ್ಲಿದ್ದಂತೆ ತಯಾರಿಸಲು ಸರ್ಕಾರ ತೀರ್ಮಾನಿಸಿ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ ನಿಯಮಾವಳಿ) 1957ರ ನಿಯಮ 10ನ್ನು ಅನುಸರಿಸಿ ಸಂಬಂಧಿಸಿದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 16.5.2003ರಂದು ಪ್ರಕಟಿಸಲಾಗಿತ್ತು.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಮೇಲೆ ಆಬಾಧಿತರಾದ ವೈದ್ಯಾಧಿಕಾರಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಅಧಿಕಾರಿಗಳಿಂದ ಬಂದ ನಿರ್ದಿಷ್ಠ ಕಾರಣಗಳು ಒಳಗೊಂಡು ಆಕ್ಷೇಪಣೆಗಳನ್ನು ಪರಿಶೀಲಿಸಿ ದಿನಾಂಕ: 16.5.2003ರ ಸರ್ಕಾರಿ ಅಧಿಸೂಚನೆಯಲ್ಲಿ ಪ್ರಕಟಗೊಂಡಿರುವ ದಿನಾಂಕ: 1.1.2003ರಲ್ಲಿದ್ದಂತೆ ಸಹ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಪರಿಗಣಿಸಿ ಸಂಬಂಧಪಟ್ಟ ಎಲ್ಲರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಶೀನಾಥ ಪಟವಾಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅನುಬಂಧ**

**ದಿನಾಂಕ: 1.1.2003ರಲ್ಲಿದ್ದಂತೆ ಸಹ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ**

| ಕ್ರ. ಸಂ | ಹೆಸರು | ನೇರ ನೇಮಕಾತಿ ಮುಂಬಡ್ತಿ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಪಡೆದ ದಿನಾಂಕ | ನೇಮಕಾತಿ ಜೇಷ್ಠತೆ ನೈಜವಾದ ಅರ್ಹತೆ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಡಾ: ಹೆಚ್.ಎಂ. ಬಸವನಗೌಡ | ಮುಂಬಡ್ತಿ | ಅನ್ವಯಿಸುವುದಿಲ್ಲ | 05-06-45 | 23-08-69 | 03-04-2001 | 03-04-2001 |
| 2 | ಡಾ: ಹೆಚ್.ಜಿ. ನಾರಾಯಣಮೂರ್ತಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 01-05-46 | 16-03-69 | 03-04-2001 | 03-04-2001 |
| 3 | ಡಾ: ಎಂ.ವಿ. ಜ್ಯೋತಿ ಪ್ರಕಾಶ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 23-04-46 | 12-03-69 | 11-10-2001 | 11-10-2001 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 4 | ಡಾ: ಸಿ. ಎಸ್. ಪದ್ಮ | ಮುಂಬಡ್ತಿ | ಅನ್ವಯಿಸುವುದಿಲ್ಲ | 25-08-46 | 20-08-70 | 11-10-2001 | 11-10-2001 |
| 5 | ಡಾ: ಲಕ್ಷ್ಮಿ ನರಸು | ಮುಂಬಡ್ತಿ | ಅನ್ವಯಿಸುವುದಿಲ್ಲ | 28-05-45 | 25-04-70 | 26-09-2001 | 26-09-2001 |
| 6 | ಡಾ: ಎಸ್.ಎಸ್. ಮಲ್ಕೇಡಕರ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 23-06-46 | 13-11-70 | 26-09-2002 | 26-09-2002 |
| 7 | ಡಾ: ಆರ್.ಎಸ್. ದೇಸಾಯಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 26-10-45 | 19-10-70 | 26-09-2002 | 26-09-2002 |
| 8 | ಡಾ: ವಿ. ಕೃಷ್ಣಯ್ಯ ಚೌದರಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 20-03-46 | 10-12-70 | 26-09-2002 | 26-09-2002 |
| 9 | ಡಾ: ಜಿ. ಕಾಶೀರೆಡ್ಡಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 01-07-46 | 15-10-70 | 26-09-2002 | 26-09-2002 |
| 10 | ಡಾ: ಕೊಟಿಲ್ಡಾ ರೀಟಾ ಲೋಬೋ | ಮುಂಬಡ್ತಿ | ಅನ್ವಯಿಸುವುದಿಲ್ಲ | 14-04-46 | 04-09-71 | 26-09-2002 | 26-09-2002 |
| 11 | ಡಾ: ಎನ್. ಪ್ರಮೀಳ | ಮುಂಬಡ್ತಿ | ಅನ್ವಯಿಸುವುದಿಲ್ಲ | 28-05-46 | 04-05-71 | 26-09-2002 | 26-09-2002 |

**ಕಾಶೀನಾಥ ಪಟವಾಡಿ**

ಪಿ. ಆರ್. 1542

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣಾ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ನಿರ್ಮಾಣ ನಿಗಮ, ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಯನ್ನು ಮುಚ್ಚುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ನಿರ್ಮಾಣ ನಿಗಮ (ಕ.ರಾ.ನಿ.ನಿ) ವನ್ನು ಇಂಡಿಯನ್ ಕಂಪನಿ ಕಾಯ್ದೆ 1956ರ ಪ್ರಕಾರ 1968ನೇ ಇಸವಿಯಲ್ಲಿ ಸ್ಥಾಪಿಸಲಾಗಿತ್ತು. ಕ.ರಾ.ನಿ.ನಿ. ಯ ಧ್ಯೇಯೋದ್ದೇಶಗಳ ಪ್ರಕಾರ ಸರ್ಕಾರದ ಕಾಮಗಾರಿಗಳ ವೆಚ್ಚವನ್ನು ನೈಜ ಬಿಡ್ ಆಧಾರದ ಮೇಲೆ ಸಾಧ್ಯವಾದಷ್ಟು ಕಡಿಮೆಗೊಳಿಸುವುದು ಹಾಗೂ ಕಾಮಗಾರಿಗಳಿಗೆ ಗುತ್ತಿಗೆದಾರರ ಜೊತೆ ಸ್ಪರ್ಧಾತ್ಮಕವಾಗಿ ಕಾಮಗಾರಿ ಕೈಗೊಳ್ಳುವುದು ಮತ್ತು ಖಾಸಗೀ ಗುತ್ತಿಗೆದಾರರು ಒಪ್ಪಂದದ ಕರಾರುಗಳಿಗನುಸಾರ ಕಾಮಗಾರಿ ನಿರ್ವಹಿಸಲು ವಿಫಲರಾದಲ್ಲಿ ಹಾಗೂ ಕಾಮಗಾರಿಗಳಿಗೆ ಹೆಚ್ಚಿನ ದರಗಳನ್ನು ಕೇಳಿದಾಗ ಅಂತಹ ಕೆಲಸಗಳನ್ನು / ಕಾಮಗಾರಿಗಳನ್ನು ತೆಗೆದುಕೊಳ್ಳಲು ಸರ್ಕಾರದ ಅಧೀನದಲ್ಲಿ ಒಂದು ಸಂಸ್ಥೆ ಇರಲಿ ಎಂಬ ಉದ್ದೇಶದಿಂದ ಈ ಸಂಸ್ಥೆಯನ್ನು ಸ್ಥಾಪಿಸಲಾಗಿತ್ತು. ಕ.ರಾ.ನಿ.ನಿ. ಕ್ಕೆ ಕಾಮಗಾರಿ ವಹಿಸುವಾಗ ಎಸ್.ಆರ್. ದರಗಳಿಗಿಂತ (Schedule Rate) ಶೇ. 10 ರಷ್ಟು. ಹೆಚ್ಚಿನ ದರಗಳನ್ನು ನೀಡಲಾಗುತ್ತಿತ್ತು. ಕಾಲಾಂತರ ಗುತ್ತಿಗೆದಾರರು ಸ್ಪರ್ಧಾತ್ಮಕವಾಗಿ ಕಾಮಗಾರಿಗಳನ್ನು ಕೈಗೊಳ್ಳಲು ಎಸ್.ಆರ್. ದರಗಳಲ್ಲಿ ಮತ್ತು ಕೆಲವಾರು ಬಾರಿ, ಈ ಎಸ್.ಆರ್. ದರಗಳಿಗಿಂತ ಕಡಿಮೆಯಲ್ಲಿ ಕಾಮಗಾರಿಗಳನ್ನು ತೆಗೆದುಕೊಂಡಿರುವ ಸಂದರ್ಭಗಳು ಇವೆ. ಅದಲ್ಲದೆ ಕ.ರಾ.ನಿ.ನಿ. ಕೈಗೊಂಡ ಕಾಮಗಾರಿಗಳ ಗುಣಮಟ್ಟದ ಬಗ್ಗೆಯೂ ದೂರುಗಳಿದ್ದ ಕಾರಣ, ಸರ್ಕಾರವು ಕ.ರಾ.ನಿ.ನಿ. ತನ್ನ ಉಪಯುಕ್ತತೆಯನ್ನು ಕಳೆದುಕೊಂಡಿದೆ ಎಂಬ ಅಭಿಪ್ರಾಯ ತಳೆದಿದ್ದರಿಂದ, ರಾಜ್ಯದ 2000-2001ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಯವರು ಕ.ರಾ.ನಿ.ನಿ. ಯನ್ನು ಮುಚ್ಚಿ ಇದರ ಎಲ್ಲಾ ಸಂಪನ್ಮೂಲಗಳನ್ನು ಲೋಕೋಪಯೋಗಿ ಇಲಾಖೆಗೆ ವಹಿಸಲಾಗುವುದು ಎಂದು ಘೋಷಿಸಿದ್ದರು.

ಮಾನ್ಯ ಮುಖ್ಯಮಂತ್ರಿಗಳ ಘೋಷಣೆಯ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ನಿರ್ಮಾಣ ನಿಗಮವನ್ನು ಮುಚ್ಚಲು ಕೈಗೊಳ್ಳಬೇಕಾದ ಕ್ರಮದ ಪ್ರಕ್ರಿಯೆಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಸಲುವಾಗಿ ಸರ್ಕಾರದ ಕಾರ್ಯದರ್ಶಿಗಳು ಆರ್ಥಿಕ ಇಲಾಖೆ (ವೆಚ್ಚ) ಇವರ ಅಧ್ಯಕ್ಷತೆಯಲ್ಲಿ ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ ಮತ್ತು ಕಾರ್ಯನಿರ್ವಾಹಕ ನಿರ್ದೇಶಕರು (ಆರ್ಥಿಕ) ಕೃಷ್ಣಭಾಗ್ಯ ಜಲನಿಗಮ, ಬೆಂಗಳೂರು ಇವರನ್ನು ಒಳಗೊಂಡ ಒಂದು ಸಮಿತಿಯನ್ನು 19.5.2000 ರಲ್ಲಿ ರಚಿಸಿ ಸರ್ಕಾರಿ ಆದೇಶವನ್ನು ಹೊರಡಿಸಲಾಯಿತು. ಸಮಿತಿಯು ನಿಗಮವನ್ನು ಮುಚ್ಚುವ ಬಗ್ಗೆ ನಿಗಮದ ಎಲ್ಲಾ ಅಂಶಗಳನ್ನು ನಿಗಮದ ಹಿರಿಯ ಅಧಿಕಾರಿಗಳ ಹಾಗೂ ಸಂಬಂಧಿಸಿದ ಇಲಾಖೆಗಳ ಅಧಿಕಾರಿಗಳ ಜೊತೆ ಚರ್ಚಿಸಿ ಅಂತಿಮವಾಗಿ ದಿನಾಂಕ 26.2.2001 ರಂದು ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ಪಿ.ಎಸ್.ಆರ್.ಸಿ. ಯು ಕೂಡ ಕ.ರಾ.ನಿ.ನಿ. ಮುಚ್ಚುವುದು ಸೂಕ್ತ ಎಂದು ವರದಿಯನ್ನು ಸಲ್ಲಿಸಿತು. ತದನಂತರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಉನ್ನತ ಮಟ್ಟದ ಸಮಿತಿಯು (HPC), ದಿನಾಂಕ: 20.1.2001 ರಂದು ನಿಗಮವನ್ನು ಮುಚ್ಚಲು ಶಿಫಾರಸ್ಸು ಮಾಡಿತು.

ಈ ಮಧ್ಯೆ ಕರ್ನಾಟಕ ರಾಜ್ಯ ನೀರಾವರಿ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಕೋರಿಕೆಯ ಹಿನ್ನೆಲೆಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಆದೇಶದಂತೆ ಕೆಲವು ಕಾಮಗಾರಿಯನ್ನು ಡಿಸೆಂಬರ್ 2001ರ ಅಂತ್ಯದವರೆವಿಗೂ, ಮುಂದುವರೆಸಿ, ಆ ಅವಧಿ ಒಳಗಾಗಿ ಯೋಜನೆಗಳನ್ನು ಮುಕ್ತಾಯ ಮಾಡಲು ಸೂಚನೆಗಳನ್ನು ನೀಡಲಾಗಿತ್ತು. ಈ ಸಂಬಂಧ ದಿನಾಂಕ: 19.9.2001 ರಂದು ನಡೆದ ಉನ್ನತ ಮಟ್ಟದ ಸಮಿತಿಯು ಕ.ರಾ.ನಿ.ನಿ. ಯು ಮುಂದುವರಿಸಿದ್ದ ಕಾಮಗಾರಿಗಳನ್ನು ದಿನಾಂಕ: 31.12.2001ರ ಒಳಗಾಗಿ ಮುಗಿಸಬೇಕೆಂದು, ಹಾಗೂ ನಂತರ ಯಾವುದೇ ಕಾರಣಕ್ಕೂ ವಿಸ್ತರಣೆಗೆ ಅನುಮತಿ ನೀಡಬಾರದೆಂದು ಸಹ ತೀರ್ಮಾನಿಸಿತು. ಅನಂತರ ದಿನಾಂಕ: 17.1.2002 ರಂದು ನಡೆದ ಸಚಿವ ಸಂಪುಟ ಸಭೆಯು ಕ.ರಾ.ನಿ.ನಿ. ಮುಚ್ಚುವ ಪ್ರಸ್ತಾವನೆಗೆ ಒಪ್ಪಿಗೆ ನೀಡಿತು.

ಕರ್ನಾಟಕ ರಾಜ್ಯ ನಿರ್ಮಾಣ ನಿಗಮದ ಸಂಘದ ಬೈಲಾ 11ರ ಪ್ರಕಾರ ನಿಗಮದ ಮಾರಾಟ, ಭೋಗ್ಯ ಅಥವಾ ನಿಗಮವನ್ನು ಪೂರ್ಣವಾಗಿ ಮಾರಾಟ ಮಾಡುವಾ, ಭೋಗ್ಯ ಮಾಡುವಾ ಅಥವಾ ಪೂರ್ಣ ಪ್ರಮಾಣದಲ್ಲಿ ಅಥವಾ ಗಮನಾರ್ಹ ಪ್ರಮಾಣದಲ್ಲಿ

ಮಾರಾಟ ಮಾಡುವ ಅಥವಾ ಮುಚ್ಚುವ ಬಗ್ಗೆ ಸನ್ಮಾನ್ಯ ರಾಜ್ಯಪಾಲರ ಪೂರ್ವಾನುಮೋದನೆ ಅಗತ್ಯವಿದ್ದು, ಅದರಂತೆ ಸಚಿವ ಸಂಪುಟದ ಅನುಮೋದನೆ ನಂತರ ನಿಗಮವನ್ನು ಮುಚ್ಚುವ ಪ್ರಸ್ತಾವನೆಯನ್ನು ಸನ್ಮಾನ್ಯ ರಾಜ್ಯಪಾಲರ ಅನುಮೋದನೆಗೆ ಮಂಡಿಸಲಾಗಿ ಸನ್ಮಾನ್ಯ ರಾಜ್ಯಪಾಲರು ದಿನಾಂಕ: 25.11.2003 ರಂದು ಕರ್ನಾಟಕ ರಾಜ್ಯ ನಿರ್ಮಾಣ ನಿಗಮವನ್ನು ಮುಚ್ಚಲು ಅನುಮೋದನೆಯನ್ನು ನೀಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್ 84 ಎಆರ್‌ಯು 2002, ಬೆಂಗಳೂರು, ದಿನಾಂಕ: 9ನೇ ಡಿಸೆಂಬರ್ 2003**

1. ಕಾನೂನಿನ ಚೌಕಟ್ಟಿನಲ್ಲಿ ಅವಶ್ಯಕವಾದ ಕ್ರಮವನ್ನು ಜರುಗಿಸಿ ಕ.ರಾ.ನಿ.ನಿ. ಅನ್ನು ಸ್ವಯಂ ಇಚ್ಛೆಯಿಂದ ಮುಚ್ಚುವುದು. ಕರ್ನಾಟಕ ರಾಜ್ಯ ನೀರಾವರಿ ನಿಗಮದ ಎರಡು ಯೋಜನೆಗಳನ್ನು ಹೊರತುಪಡಿಸಿ ಕ.ರಾ.ನಿ.ನಿ.ಯ ಎಲ್ಲಾ ಕಾಮಗಾರಿಗಳನ್ನು ಸ್ಥಗಿತಗೊಳಿಸಿ, ಕರ್ನಾಟಕ ರಾಜ್ಯ ನೀರಾವರಿ ನಿಗಮದ ಎರಡು ಯೋಜನೆಗಳು ಪೂರ್ಣಗೊಳ್ಳುವವರೆಗೆ, ಕ.ರಾ.ನಿ.ನಿ. ಯನ್ನು ಮುಚ್ಚಲು ನೇಮಿಸುವ ತೀರುವಳಿದಾರರ ಮೇಲ್ವಿಚಾರಣೆಯಲ್ಲಿ ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ ಮೇಲಿರುವ ಇಂಜಿನಿಯರುಗಳಿಂದ ಮುಂದುವರೆಸುವುದು. ಹಾಗೂ ಅಂತಹ ಕಾಮಗಾರಿಗಳನ್ನು ಆಯಾ ಇಲಾಖೆಗಳು ತಮ್ಮ ವಶಕ್ಕೆ ತೆಗೆದುಕೊಳ್ಳುವುದು.
2. ಕ.ರಾ.ನಿ.ನಿ. ಯನ್ನು ಮುಚ್ಚುವ ಪ್ರಕ್ರಿಯೆಗಳಿಗೆ ಬೇಕಾಗುವ ಸಿಬ್ಬಂದಿಯನ್ನು ಹೊರತುಪಡಿಸಿ ನಿಯೋಜನೆ ಮೇಲಿರುವವರನ್ನು ಅವರವರ ಮಾತೃ ಇಲಾಖೆಗೆ ಹಿಂತಿರುಗಿಸುವುದು.
3. ಅರ್ಹ ಸಿಬ್ಬಂದಿಗಳಿಗೆ ಸರ್ಕಾರಿ ಆದೇಶದಲ್ಲಿನ ಷರತ್ತು ಹಾಗೂ ನಿಬಂಧನೆಗಳನ್ವಯ ಸ್ವಯಂ ನಿವೃತ್ತಿ ಸೌಲಭ್ಯವನ್ನು ನೀಡುವುದು. ಸ್ವಯಂ ನಿವೃತ್ತಿ ಯೋಜನೆಗೆ ಬೇಕಾಗುವ ಹಣ (ಸುಮಾರು 6 ಕೋಟಿ ಎಂದು ಅಂದಾಜಿದೆ) ವನ್ನು ಆರ್ಥಿಕ ಇಲಾಖೆಯು (ಅವರು ವಿಧಿಸುವ ಷರತ್ತುಗಳನ್ವಯ) ಬಿಡುಗಡೆ ಮಾಡುವುದು. ಸ್ವಯಂ ನಿವೃತ್ತಿ ಯೋಜನೆ ವ್ಯಾಪ್ತಿಯಲ್ಲಿ ಬಾರದ ಸಿಬ್ಬಂದಿಯನ್ನು ಐ.ಡಿ. ಆಕ್ಟ್ ಪ್ರಕಾರ ರಿಟ್ರೆಂಚ್ ಮಾಡುವುದು.
4. ನಿಗಮದ ಆಸ್ತಿ / ಹೊಣೆಗಾರಿಕೆ / ದಾಖಲೆ / ಕಡತಗಳನ್ನು ಅಧೀಕ್ಷಕ ಅಭಿಯಂತರರು (ಡಿಸೈನ್ಸ್), ಮುಖ್ಯ ಇಂಜಿನಿಯರ್ ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ತೆಗೆದುಕೊಳ್ಳುವುದು.
5. ಲಿಕ್ವಿಡೇಟರ್ ನೇಮಕದ ಬಗ್ಗೆ ಪ್ರಸ್ತಾವನೆಯನ್ನು ಮಂಡಳಿ (Board) / AGM ಅನುಮೋದನೆ ಪಡೆದು ಡಿಡಿಪಿಇಆರ್ ಇಲಾಖೆಗೆ ಕಳುಹಿಸುವುದು.
6. ನಿಗಮಕ್ಕೆ ಕೊಡಬೇಕಾದ ಬಾಕಿ ಬಿಲ್ಲುಗಳನ್ನು ಇತ್ಯರ್ಥ ಪಡಿಸುವಂತೆ ಸಂಬಂಧಪಟ್ಟ ಇಲಾಖೆ / ಸಂಸ್ಥೆಗಳಿಗೆ ಮುಖ್ಯ ಕಾರ್ಯದರ್ಶಿಯವರಿಂದ ನಿರ್ದೇಶನ ನೀಡುವುದು ಹಾಗೂ ಕಾಮಗಾರಿಗಳು ಪೂರ್ಣವಾಗಿರಲಿ ಅಥವಾ ಅಪೂರ್ಣವಾಗಿರಲಿ ಅವುಗಳನ್ನು ಆಯಾ ಇಲಾಖೆ / ಸಂಸ್ಥೆಗಳು ತೆಗೆದುಕೊಳ್ಳುವುದು.
7. ಯಾವುದೇ ರಾಜ್ಯ ಸರ್ಕಾರದ ಇಲಾಖೆಗಳು ಅಥವಾ ನಿಗಮಗಳಿಗೆ ಮತ್ತು ಕ.ರಾ.ನಿ.ನಿ.ಗೆ ನೀಡಬೇಕಾದ ಅಥವಾ ಅದರಿಂದ ಇತರ ಇಲಾಖೆಗಳಿಗೆ ಬರಬೇಕಾದ ಬಾಕಿಗಳ ವಿಷಯವೂ ಸೇರಿದಂತೆ, ವಿವಾದಗಳು ಬಂದಲ್ಲಿ ಅಂತಹ ವಿವಾದಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರಿಗೆ ಕಳಿಸತಕ್ಕದ್ದು ಹಾಗೂ ಅಪರ ಮುಖ್ಯ ಕಾರ್ಯದರ್ಶಿಗಳ ತೀರ್ಮಾನವೇ ಅಂತಿಮವಾಗಿದ್ದು, ವಿವಾದಗಳಿಗೆ ಸಂಬಂಧಿಸಿದವರು ಅದಕ್ಕೆ ಬದ್ಧರಾಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1546

ಉಪನಿರ್ದೇಶಕರು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಡಿಡಿಪಿಇಆರ್.

## ಶಿಕ್ಷಣ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಇಡಿ 156 ಡಿಜಿಡಿ 2003, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2003**

**ವಿಷಯ:** ನೀತಿ ನಿರ್ಣಯಗಳಿಗೆ : ಯೋಜನಾ ಬದಲಾವಣೆಗಳಿಗೆ ಸಂಬಂಧಪಟ್ಟಂತೆ ಸಚಿವರ ಗಮನಕ್ಕೆ ತಾರದೆ ಯಾವುದೇ ಅಧಿಕಾರಿ ಮಾಧ್ಯಮಗಳಲ್ಲಿ ಹೇಳಿಕೆ ನೀಡುವುದನ್ನು ಪ್ರತಿಬಂಧಿಸುವ ಬಗ್ಗೆ.

ಇಲಾಖೆಯಲ್ಲಿ ಜಾರಿಯಲ್ಲಿರುವ ನೀತಿ : ಯೋಜನೆಗಳ ಅನುಷ್ಠಾನದ ಪದ್ಧತಿಯಲ್ಲಿ ಬದಲಾವಣೆಗಳ ಬಗ್ಗೆ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ರಾಜ್ಯ ಸಚಿವರ ಗಮನಕ್ಕೆ ತರದೆ, ಇಲಾಖೆಯ ಕೆಲವು ಅಧಿಕಾರಿಗಳು ಮಾಧ್ಯಮಗಳಿಗೆ ಹೇಳಿಕೆ ನೀಡುತ್ತಿರುವುದು ಗಮನಕ್ಕೆ ಬಂದಿದೆ. ಇದು ಆಡಳಿತದಲ್ಲಿನ ಶಿಷ್ಟಾಚಾರದ ಅತಿಕ್ರಮಣವಾಗುತ್ತದೆ.

2. ಹಿಂದೆ ಹಲವಾರು ಸೂಚನೆಗಳನ್ನು ಕೊಟ್ಟಿದ್ದರೂ ಸಹ, ಇದು ಪುನರಾವರ್ತನೆಯಾಗುತ್ತಿರುವುದು ಅತ್ಯಂತ ವಿಷಾದನೀಯ ಸಂಗತಿ.

3. ಇನ್ನು ಮುಂದೆ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ರಾಜ್ಯಸಚಿವರ ಗಮನಕ್ಕೆ ಪೂರ್ವಭಾವಿಯಾಗಿ ತರದೆ, ಇಲಾಖೆಗೆ ಸಂಬಂಧಿಸಿದ ನೀತಿ ನಿರ್ಣಯಗಳ ಬಗ್ಗೆ ಅಥವಾ ಯೋಜನೆಗಳ ಅನುಷ್ಠಾನದಲ್ಲಿನ ಬದಲಾವಣೆಗಳ ಬಗ್ಗೆ ಸಾರ್ವಜನಿಕ ಮಾಧ್ಯಮಗಳಿಗೆ ಹೇಳಿಕೆಗಳನ್ನು ನೀಡಲೇಬಾರದು ಎಂದು ಈ ಮೂಲಕ ಮತ್ತೊಮ್ಮೆ ಸೂಚಿಸಿದೆ.

**ಎಫ್.ಆರ್. ಸಂಬರಗಿ**

ಪಿ.ಆರ್. 1547

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು 1, 2).

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ: 15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ ಯೋಇ 589 ಯೋವಿವಿ 99 ದಿನಾಂಕ: 15.12.1999.

2) ಮಾನ್ಯ ಮುಖ್ಯ ಮಂತ್ರಿಯವರ ಕಾರ್ಯಾಲಯದ ಇಂಟರ್-ಆಫೀಸ್ ನೋಟ್ ಸಂಖ್ಯೆ: 315:2003 ದಿನಾಂಕ: 26.12.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ, ಜಿಲ್ಲಾ ಮಟ್ಟದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ : 20 ಅಂಶ ಕಾರ್ಯಕ್ರಮ : 15 ಅಂಶ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಿಸಲಾಗಿದೆ.

ಮೇಲೆ ಓದಲಾದ (2)ರ ಮುಖ್ಯಮಂತ್ರಿಯವರ ಕಾರ್ಯಾಲಯದ ಇಂಟರ್-ಆಫೀಸ್ ನೋಟ್ ದಿನಾಂಕ: 26.12.2003 ರಲ್ಲಿ ಶ್ರೀಮತಿ ಸುಮಾ ವಸಂತ್, ಮುಜರಾಯಿ ರಾಜ್ಯ ಸಚಿವರು ಇವರನ್ನು ಕೊಡಗು ಜಿಲ್ಲೆಯ ಉಸ್ತುವಾರಿ ಸಚಿವರನ್ನಾಗಿ ನೇಮಕ ಮಾಡಲು ಮಾನ್ಯ ಮುಖ್ಯಮಂತ್ರಿಯವರು ಆದೇಶಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 433 ಯೋವಿವಿ 2002, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2003**

ಶ್ರೀಮತಿ ಸುಮಾ ವಸಂತ್, ಮುಜರಾಯಿ ರಾಜ್ಯ ಸಚಿವರು, ಕರ್ನಾಟಕ ಸರ್ಕಾರ ಇವರನ್ನು ಕೊಡಗು ಜಿಲ್ಲೆಯ ಉಸ್ತುವಾರಿ ಸಚಿವರೆಂದು ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1549

**ಬಿ.ಎಂ. ಶಿವಪ್ರಕಾಶ್**

ಸರ್ಕಾರದ ಸಹ ಕಾರ್ಯದರ್ಶಿ,

ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ನಕಲಿ ಉಬ್ಬಚ್ಚು ಕಾಗದಗಳ ಪ್ರಕರಣವನ್ನು ತನಿಖೆಗಾಗಿ ಸ್ಟ್ಯಾಂಪಿಟ್‌ಗೆ ವಹಿಸುವ ಬಗ್ಗೆ - ಆದೇಶಗಳು.

**ಓದಲಾಗಿದೆ:** 1) ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ/73/ಮುನೋಮು/2002, ದಿನಾಂಕ: 5.7.2003 ಮತ್ತು 6.10.2003.

2) ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ/429/ಮುನೋಮು/2002, ದಿನಾಂಕ: 9.10.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ದಿನಾಂಕ: 5.7.2003, 6.10.2003 ಮತ್ತು 9.10.2003 ರ ಅನಧಿಕೃತ ಟಿಪ್ಪಣಿಗಳಲ್ಲಿ ಪಂಜಾಬ್ ನ್ಯಾಷನಲ್ ಬ್ಯಾಂಕ್, ಮೈಸೂರು ಇವರು ದಿನಾಂಕ: 28.2.2002 ರಂದು ಅರ್ಜಿ ಸಲ್ಲಿಸಿ ಒಟ್ಟು ರೂ. 9,850/- ಗಳ ಮುದ್ರಾಂಕ ಉಬ್ಬಚ್ಚು ಪತ್ರಗಳ ಮೌಲ್ಯ ಮರುಪಾವತಿ ಮಾಡಬೇಕೆಂದು ಮತ್ತು ಮೆ: ಭಾರತ ಕಂಡಕ್ಟರ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ರೂ. 22,170/- ಗಳ ಉಬ್ಬಚ್ಚು ಕಾಗದ ಪತ್ರಗಳನ್ನು ಮರುಪಾವತಿ ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಸದರಿ ಉಬ್ಬಚ್ಚು ಕಾಗದಗಳ ಬಗ್ಗೆ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಸದರಿ ಉಬ್ಬಚ್ಚುಗಳು ನಕಲಿಯಾಗಿದ್ದು ಇವುಗಳನ್ನು ಖಜಾನೆ ಉಪ ನಿರ್ದೇಶಕರಿಂದಾಗಲೀ ಅಥವಾ ಮುದ್ರಾಂಕ ಭಂಡಾರ ಕಾರ್ಯಾಲಯದಿಂದಾಗಲೀ ಉಬ್ಬಚ್ಚು ಮಾಡಿಸಿಲ್ಲವೆಂದು ತಿಳಿಸುತ್ತಾ ಇವುಗಳನ್ನು ಹಾಜರುಪಡಿಸಿದವರ ಮೇಲೆ ಕಾನೂನಿನನ್ವಯ ಕ್ರಮ ತೆಗೆದುಕೊಳ್ಳಬೇಕೆಂದು ಕೋರಿರುವ ಹಿನ್ನೆಲೆಯಲ್ಲಿ ಈ ಪ್ರಕರಣಗಳನ್ನು ತನಿಖೆಗಾಗಿ, ಖೋಟಾ ಛಾಪಾ ಕಾಗದದ ಪ್ರಕರಣವನ್ನು ತನಿಖೆ ನಡೆಸುತ್ತಿರುವ ಸ್ಟ್ಯಾಂಪಿಟ್ [STAMPIT] ಗೆ ವಹಿಸಬೇಕೆಂದು ಕಂದಾಯ ಇಲಾಖೆಯು ಕೋರಿರುತ್ತದೆ. ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 128 ಪಿಸಿಆರ್ 2003, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2003**

ಪಂಜಾಬ್ ನ್ಯಾಷನಲ್ ಬ್ಯಾಂಕ್, ಮೈಸೂರು ಇವರು ದಿನಾಂಕ: 28.2.2002 ರಂದು ಮರುಪಾವತಿಗಾಗಿ ಸಲ್ಲಿಸಿರುವ ಮುದ್ರಾಂಕ ಉಬ್ಬಚ್ಚುಗಳು ಮತ್ತು ಭಾರತ ಕಂಡಕ್ಟರ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ಮರುಪಾವತಿಗಾಗಿ ಸಲ್ಲಿಸಿರುವ ಉಬ್ಬಚ್ಚುಗಳ ನೈಜತೆಯ ಬಗ್ಗೆ ತನಿಖೆ ನಡೆಸಲು, ಖೋಟಾ ಛಾಪಾ ಕಾಗದ ಪ್ರಕರಣವನ್ನು ತನಿಖೆ ನಡೆಸುತ್ತಿರುವ ಸ್ಟ್ಯಾಂಪಿಟ್ [STAMPIT] ತಂಡಕ್ಕೆ ವಹಿಸಿ ಆದೇಶಿಸಲಾಗಿದೆ.

ಸದರಿ ಪ್ರಕರಣದ ಬಗ್ಗೆ ತನಿಖೆ ನಡೆಸಿ ಮೂರು ತಿಂಗಳೊಳಗಾಗಿ ತನಿಖಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ತನಿಖೆಗಾಗಿ ಅಗತ್ಯವಾದ ಮಾಹಿತಿ ಹಾಗೂ ದಾಖಲೆಗಳನ್ನು ಕಂದಾಯ ಇಲಾಖೆಯಿಂದ ಪಡೆದುಕೊಳ್ಳುವಂತೆ ತನಿಖಾ ತಂಡಕ್ಕೆ ಆದೇಶಿಸಲಾಗಿದೆ. ಪೊಲೀಸ್ ಆಯುಕ್ತರು, ಮೈಸೂರು ಮತ್ತು ಬೆಂಗಳೂರು ಹಾಗೂ ಕಂದಾಯ ಇಲಾಖೆ, ತನಿಖಾ ತಂಡಕ್ಕೆ ಪೂರ್ಣ ಸಹಕಾರ ನೀಡುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1550

**ಪಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಅಪರಾಧಗಳು).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಅಬ್ದುಲ್ ನಜೀರಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಯ ಗಣಕ ಕೇಂದ್ರ ವಿಭಾಗಕ್ಕೆ ಮಂಜೂರಾಗಿರುವ ಸೀನಿಯರ್ ಪ್ರೋಗ್ರಾಮರ್ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರ ಪತ್ರ ಸಂಖ್ಯೆ: ರಾಗ್ರಾಸ/ಸಿಬ್ಬಂದಿ/54/96-97, ದಿನಾಂಕ: 28.3.2003.

**ಪ್ರಸ್ತಾವನೆ:**

ಮಹಾ ನಿರ್ದೇಶಕರು, ಅಬ್ದುಲ್ ನಜೀರಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ರವರು ಓದಲಾದ ಪತ್ರದಲ್ಲಿ ಸೀನಿಯರ್ ಪ್ರೋಗ್ರಾಮರ್ ಹುದ್ದೆಗೆ ಅಗತ್ಯವಿರುವ ಗುಣಮಟ್ಟದ ಅಭ್ಯರ್ಥಿಯು ದೊರೆಯಬೇಕಾದಲ್ಲಿ ಕನಿಷ್ಠ ಅಭ್ಯರ್ಥಿಗಳ ಅರ್ಹತೆ ಮತ್ತು ಅನುಭವ ಆಧರಿಸಿ ರೂ. 12,000.00 ರಿಂದ 15,000.00 ವೇತನ ಮಿತಿ ಇರಿಸಿಕೊಂಡು ಸೂಕ್ತವೆನಿಸುವ ಕ್ರೋಢಿಕೃತ ವೇತನ ನಿಗದಿಪಡಿಸಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ. ಈ ಬಗ್ಗೆ ಸರ್ಕಾರವು ವಿವರವಾಗಿ ಪರಿಶೀಲಿಸಲಾಗಿದ್ದು ರೂ. 11,500.00 ಸಂಚಿತ ವೇತನ ನಿಗದಿಪಡಿಸಿ ಗುತ್ತಿಗೆ ಆಧಾರದಲ್ಲಿ ಸದರಿ ಹುದ್ದೆಗೆ ನೇಮಿಸಿಕೊಳ್ಳಲು ಅನುಮತಿ ನೀಡಲು ನಿರ್ಣಯಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 17 ಡಿಟಿಆರ್ 2003, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2003

ಅಬ್ದುಲ್ ನಜೀರಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಯ ಗಣಕ ಕೇಂದ್ರಕ್ಕೆ ಮಂಜೂರಾಗಿರುವ ಸೀನಿಯರ್ ಪ್ರೋಗ್ರಾಮರ್ ಹುದ್ದೆಗೆ ವೇತನ ಶ್ರೇಣಿ ರೂ. 7,400-13,200 ಆಗಿದ್ದು ಹುದ್ದೆಯ ಕನಿಷ್ಠ ವೇತನವನ್ನು ಆಧರಿಸಿ, ಅದರ ಮೇಲೆ ಪ್ರಚಲಿತ ದರದಲ್ಲಿ ಲಭ್ಯವಾಗುವ ತುಟ್ಟಿಭತ್ಯೆಯನ್ನು ಸೇರಿಸಿದಾಗ ರೂ. 11,470.00 ಆಗಲಿದ್ದು, ಸಂಚಿತ ವೇತನವನ್ನು ರೂ. 11,500 ಕ್ಕೆ ನಿಗದಿಪಡಿಸಲು ತೀರ್ಮಾನಿಸಲಾಯಿತು. ಆದುದರಿಂದ ಸೀನಿಯರ್ ಪ್ರೋಗ್ರಾಮರ್ ಹುದ್ದೆಗೆ ಗುತ್ತಿಗೆ ಆಧಾರದಲ್ಲಿ ನೇಮಕ ಮಾಡಲು ರೂ. 11,500.00 (ರೂಪಾಯಿ ಹನ್ನೊಂದು ಸಾವಿರದ ಐನೂರು ಮಾತ್ರ) ಸಂಚಿತ ವೇತನ ನಿಗದಿಪಡಿಸುವ ಷರತ್ತಿಗೊಳಪಟ್ಟು ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1738 ವೆಚ್ಚ-6 2003 ದಿನಾಂಕ: 22.10.2003 ರ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1551

**ಎಲ್. ಷಣ್ಮುಖ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಬಿ.ಟಿ. ಗೋವಿಂದಮರಿಗೌಡ ಹಿಂದಿನ ತಹಶೀಲ್ದಾರ್ ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**

1) ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ದಿನಾಂಕ: 24.4.2001ರ ಪತ್ರ ಸಂಖ್ಯೆ: ಇಎಸ್‌ಟಿ (2) ಸಿಆರ್ 30:99-2000.

2) ದಿನಾಂಕ: 18.7.2002ರ ತಿಳುವಳಿಕೆ ಪತ್ರ ಸಂಖ್ಯೆ: ಆರ್‌ಡಿ 48 ಎಡಿಇ 2001.

3) ಲಿಖಿತ ಹೇಳಿಕೆ: 1) ಶ್ರೀ ಎಂ. ಮೊಹಮ್ಮದ್ ಸಿಗ್ಬತುಲ್ಲಾ, ದ್ವಿ.ದ.ಸ., ದಿನಾಂಕ: 28.8.2002.
   2) ಶ್ರೀ ಬಿ.ಟಿ. ಗೋವಿಂದಮರಿಗೌಡ, ತಹಶೀಲ್ದಾರ್ (ನಿವೃತ್ತ) ದಿನಾಂಕ: 4.9.2002.
   3) ಶ್ರೀ ಎಂ. ನಾಗೇಶ್, ದ್ವಿ.ದ.ಸ. ದಿನಾಂಕ: 31.8.2002
   4) ಶ್ರೀ ಹೆಚ್.ಎನ್. ರಾಮಚಂದ್ರಯ್ಯ, ಹಿಂದಿನ ಶಿರಸ್ತೇದಾರ್, ದಿನಾಂಕ: 25.9.2002.

**ಪ್ರಸ್ತಾವನೆ:**

ಹೊಸಕೋಟೆ ತಾಲ್ಲೂಕಿನಲ್ಲಿ 1998ನೇ ಸಾಲಿನಲ್ಲಿ ಭಾರಿ ಮಳೆಯಿಂದ ಉಂಟಾದ ನಷ್ಟಕ್ಕೆ ಪರಿಹಾರ ಮಂಜೂರು ಮಾಡುವಲ್ಲಿ ಹಣ ದುರುಪಯೋಗಪಡಿಸಿರುತ್ತಾರೆಂಬ ಸಾರ್ವಜನಿಕರ ದೂರುಗಳು ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಅಧಿಕಾರಿ : ನೌಕರರು ಕರ್ತವ್ಯಲೋಪ ಎಸಗಿರುತ್ತಾರೆಂದು ಮತ್ತು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಬೇಕೆಂದು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 24.4.2001 ರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

**ಶ್ರೀಯುತರು:**

1. ಬಿ.ಟಿ. ಗೋವಿಂದಮರಿಗೌಡ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು (ಹಾಲಿ ನಿವೃತ್ತರು)
2. ಹೆಚ್.ಎನ್. ರಾಮಚಂದ್ರಯ್ಯ, ಹಿಂದಿನ ತಾಲ್ಲೂಕು ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹಾಲಿ ತಹಶೀಲ್ದಾರ್ ಚಿಕ್ಕಬಳ್ಳಾಪುರ ತಾಲ್ಲೂಕು.
3. ಎಂ. ನಾಗೇಶ್, ಹಿಂದಿನ ದ್ವಿ.ದ.ಸ. ತಾಲ್ಲೂಕು ಕಛೇರಿ, ಹೊಸಕೋಟೆ ತಾ:
4. ಕೆ.ಸಿ. ಸತೀಶ್, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ತಾ:

5. ಮೊಹಮ್ಮದ್ ಸಿಗ್ಬತುಲ್ಲಾ, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು.
6. ಆರ್. ಚಿನ್ನಸ್ವಾಮಿ, ಹಿಂದಿನ ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಹೊಸಕೋಟೆ ತಾ:

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು (ಅನುಬಂಧ 1 ರಿಂದ 4 ರವರೆಗೆ) ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 18.7.2002 ರ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ಆರೋಪಗಳ ಬಗ್ಗೆ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ 4 ಮಂದಿ ಅಧಿಕಾರಿ : ನೌಕರರು ಮಾತ್ರ ತಮ್ಮ ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ ಅವರುಗಳ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ ಹಾಗೂ ಉದ್ದೇಶಿತ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಈ ಪ್ರಕರಣದಲ್ಲಿನ ಇನ್ನಿಬ್ಬರು ಆಪಾದಿತ ನೌಕರರಾದ ಶ್ರೀ ಕೆ.ಸಿ. ಸತೀಶ್, ಹಿಂದಿನ ದ್ವಿ.ದ.ಸ. ಮತ್ತು ಶ್ರೀ ಚಿನ್ನಸ್ವಾಮಿ, ಹಿಂದಿನ ದ್ವಿ.ದ.ಸ. ತಾಲ್ಲೂಕು ಕಛೇರಿ, ಹೊಸಕೋಟೆ ಇವರುಗಳಿಗೆ ಜಾರಿಗೊಳಿಸಲಾಗಿದ್ದ ಆರೋಪಗಳ ಬಗ್ಗೆ ಲಿಖಿತ ಉತ್ತರ ಸಲ್ಲಿಸಲು ಅವರುಗಳಿಗೆ ನೀಡಲಾಗಿದ್ದ ಸಮಯಾವಕಾಶ ಮುಗಿದ ನಂತರವೂ ಸಹ ಇಂದಿನವರೆಗೂ ಅವರುಗಳು ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಇವರುಗಳಿಗೆ ಜಾರಿಗೊಳಿಸಲಾಗಿದ್ದ ತಿಳುವಳಿಕೆ ಪತ್ರದಲ್ಲಿ ಸ್ಪಷ್ಟವಾಗಿ ಸೂಚಿಸಿರುವಂತೆ ನಿಗದಿತ ಸಮಯದೊಳಗೆ ಅವರುಗಳ ಲಿಖಿತ ಸಮಜಾಯಿಷಿಗಳನ್ನು ಸಲ್ಲಿಸದಿದ್ದಲ್ಲಿ ಆ ಬಗ್ಗೆ ಅವರ ಪ್ರತಿವಾದವೇನು ಇರುವುದಿಲ್ಲವೆಂದು ಭಾವಿಸಲಾಗುವುದೆಂದು ಸ್ಪಷ್ಟವಾಗಿ ಸೂಚಿಸಿರುವ ಹಿನ್ನೆಲೆಯಲ್ಲಿ ಇವರಿಬ್ಬರ ವಿರುದ್ಧ ಏಕಪಕ್ಷೀಯವಾಗಿ ಹಾಗೂ ಇನ್ನಿತರ ಅಧಿಕಾರಿ : ನೌಕರರ ವಿರುದ್ಧ ಜಾರಿಗೊಳಿಸಲಾಗಿರುವ ದೋಷಾರೋಪಣೆಗಳಿಗೆ ಆಪಾದಿತರು ಸಲ್ಲಿಸಿರುವ ಲಿಖಿತ ಸಮಜಾಯಿಷಿಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 48 ಎಡಿಇ 2001, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿರುವ ಅಂಶಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ವಿ. ತಿಲ್‌ಗುಲ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 1664, 19ನೇ ಮುಖ್ಯ ರಸ್ತೆ, ಹೆಚ್.ಎ.ಎಲ್. 3ನೇ ಹಂತ, ಬೆಂಗಳೂರು-75, ಇವರನ್ನು ಈ ಕೆಳಕಂಡ ಆರೋಪಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

**ಶ್ರೀಯುತರು:**

1. ಬಿ.ಟಿ. ಗೋವಿಂದಮರಿಗೌಡ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು (ಹಾಲಿ ನಿವೃತ್ತರು)
2. ಹೆಚ್.ಎನ್. ರಾಮಚಂದ್ರಯ್ಯ, ಹಿಂದಿನ ತಾಲ್ಲೂಕು ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹಾಲಿ ತಹಶೀಲ್ದಾರ್ ಚಿಕ್ಕಬಳ್ಳಾಪುರ ತಾಲ್ಲೂಕು.
3. ಎಂ. ನಾಗೇಶ್, ಹಿಂದಿನ ದ್ವಿ.ದ.ಸ. ತಾಲ್ಲೂಕು ಕಛೇರಿ, ಹೊಸಕೋಟೆ ತಾ:
4. ಕೆ.ಸಿ. ಸತೀಶ್, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ತಾ:
5. ಮೊಹಮ್ಮದ್ ಸಿಗ್ಬತುಲ್ಲಾ, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು.
6. ಆರ್. ಚಿನ್ನಸ್ವಾಮಿ, ಹಿಂದಿನ ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಹೊಸಕೋಟೆ ತಾ:

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ. 5000 (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4.3.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ 1000.00 (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್) ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಜಂಟಿ ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ವಯ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1552

**ಎಂ.ಎಸ್. ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಎನ್.ಎಸ್. ಪ್ರಭುದೇವ, ಹಿರಿಯ ತಜ್ಞರು, ಪ್ರಾ.ಆ. ಘಟಕ, ಆರೋಗ್ಯ ಮತ್ತು ಕು.ಕ. ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:**
1) ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಜೆಆರ್‌ಓ (5)/8/88-89, ದಿನಾಂಕ: 30.3.2001.
2) ಮುಖ್ಯ ಜಾಗೃತಾಧಿಕಾರಿ (ಜಾಕೋ), ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ವಿಆ/ಜಾದ/ಆ/35/2000-01, ದಿನಾಂಕ: 3.9.2001.
3) ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರ ತಿಳುವಳಿಕೆ ಪತ್ರ ಸಂಖ್ಯೆ: ಜೆಆರ್‌ಓ (5)/8/88-89 ದಿನಾಂಕ: 24.9.2001.
4) ಡಾ: ಎನ್.ಎಸ್. ಪ್ರಭುದೇವ ರವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 26.9.2001.

**ಪ್ರಸ್ತಾವನೆ:**

ಡಾ: ಎನ್.ಎಸ್. ಪ್ರಭುದೇವ, ಹಿರಿಯ ತಜ್ಞರು, ಪ್ರಾಥಮಿಕ ಆರೋಗ್ಯ ಘಟಕ, ಆರೋಗ್ಯ ಮತ್ತು ಕು.ಕ. ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರು ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 21.11.1988 ರಂದು ಕಾರ್ಯ ವಿಮುಕ್ತರಾಗಿ ಆರೋಗ್ಯ ಮತ್ತು ಕು.ಕ. ಸೇವೆಗಳ ನಿರ್ದೇಶನಾಲಯದಲ್ಲಿ ಹಾಜರಾಗದೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ-11 ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರು ಆರೋಪಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ತಿಳಿಸಿ ಆರೋಪಿತ ವೈದ್ಯಾಧಿಕಾರಿಯು ರಕ್ಷಣಾ ಹೇಳಿಕೆ ಸಲ್ಲಿಸಿದ್ದು, ಅವರ ಹೇಳಿಕೆಯಲ್ಲಿ ನೀಡಿರುವ ಕಾರಣಗಳು ಸಮಂಜಸವಾಗಿರದಿದ್ದರಿಂದ ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರು ತೀರ್ಮಾನಿಸಿ, ಮೇಲೆ (1) ರಲ್ಲಿ ಓದಲಾದ ತಮ್ಮ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ನೇಮಿಸಿ ವಿಚಾರಣೆ ನಡೆಸಿ, ವಿಚಾರಣಾ ವರದಿ ಸಲ್ಲಿಸುವಂತೆ ನಿರ್ದೇಶಿಸಿದ್ದರು.

ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ಮೇಲೆ (2) ರಲ್ಲಿ ಓದಲಾದ ಪತ್ರದ ಮೂಲಕ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಆಪಾದಿತ ವೈದ್ಯಾಧಿಕಾರಿಯ ಮೇಲೆ ಮಾಡಲಾದ ಅನಧಿಕೃತ ಗೈರುಹಾಜರಿಯ ಆಪಾದನೆ ಸಾಬೀತಾಗಿರುತ್ತದೆ ಎಂಬ ನಿರ್ಣಯಕ್ಕೆ ಬಂದಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಮೇಲೆ (3) ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಪಾದಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆ ಕೋರಲಾಗಿತ್ತು. ಆರೋಪಿತ ವೈದ್ಯಾಧಿಕಾರಿಯು ಮೇಲೆ (4) ರಲ್ಲಿ ಓದಲಾದ ಪತ್ರದ ಮೂಲಕ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ಅವರ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ಅವರ ತಂದೆಯವರು ಹೃದ್ರೋಗ ಖಾಯಿಲೆಯಿಂದ ನರಳುತ್ತಿದ್ದು ಅವರ ಶುಶ್ರೂಷೆ ಮಾಡಲು ಅವರೊಬ್ಬರೇ ಇದ್ದುದರಿಂದ ಹಾಗೂ ಅವರ ಮಾನಸಿಕ ಒತ್ತಡದಿಂದ ಮನೋರೋಗಿ ಚಿಕಿತ್ಸೆ ಪಡೆಯುತ್ತಿದ್ದುದರಿಂದ ಸೇವೆಗೆ ಅನಧಿಕೃತ ಗೈರು ಹಾಜರಿ ಆಗಿರುವೆನೆಂದು ಬೇರೆ ಯಾವುದೇ ಕಾರಣವಿರಲಿಲ್ಲವೆಂದು ಪ್ರಮಾಣ ಮಾಡಿ ಹೇಳಿಕೆ ಸಲ್ಲಿಸಿರುತ್ತಾರೆ. ಇವರ ರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಇರುವುದಿಲ್ಲ.

ಇವರ ಅನಧಿಕೃತ ಗೈರುಹಾಜರಿಯು ಸಂಪೂರ್ಣವಾಗಿ ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ತಿಳಿಸಿರುವುದರಿಂದ ಹಾಗೂ ಆಪಾದಿತರು ಯಾವುದೇ ಒಪ್ಪತಕ್ಕಂತಹ ಕಾರಣಗಳನ್ನು ನೀಡದೇ ಇರುವುದರಿಂದ ಇವರು ಸರ್ಕಾರಿ ಸೇವೆಗೆ 5 ವರ್ಷಗಳ ದೀರ್ಘಕಾಲ ಅನಧಿಕೃತ ಗೈರುಹಾಜರಾಗಿರುವುದು ಸಂಪೂರ್ಣವಾಗಿ ಸಾಬೀತಾಗಿದೆ. 4 ತಿಂಗಳಿಗಿಂತ ಹೆಚ್ಚು ಅವಧಿಗೆ ಸರ್ಕಾರಿ ಸೇವೆಗೆ ಗೈರು ಹಾಜರಿ ಆದಂತಹ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಅವಕಾಶ ನಿಯಮಗಳಲ್ಲಿದೆ. ಈ ಪ್ರಕರಣದಲ್ಲಿ ಆಪಾದಿತರು 5 ವರ್ಷಗಳ ದೀರ್ಘಕಾಲ ಸರಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿ ಆಗಿರುತ್ತಾರೆ.

ತನ್ನ ಕೌಟುಂಬಿಕ ಕಾರಣಗಳಿಂದ ಸೇವೆಗೆ ಹಾಜರಾಗಲು ಸಾಧ್ಯವಾಗಿಲ್ಲವೆಂದು ಹೇಳಿದ್ದಾರೆ. ಇದರಿಂದ ವ್ಯಕ್ತವಾಗುವ ಅಂಶವೇನೆಂದರೆ ಇವರು ಸರ್ಕಾರಿ ಸೇವೆಯನ್ನು ಗಂಭೀರವಾಗಿ ತೆಗೆದುಕೊಂಡಿಲ್ಲ. ತನ್ನ ಇಚ್ಛಾನುಸಾರ ಬರಬಹುದು, ಹೋಗಬಹುದು ಎಂಬ ಧೋರಣೆಯನ್ನು ತಾಳಿರುತ್ತಾರೆ. ಸತತ 5 ವರ್ಷ ಯಾವುದೇ ಪೂರ್ವಾನುಮತಿ ಪಡೆಯದೇ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಆದುದರಿಂದ ಇವರ ಅನಧಿಕೃತ ಗೈರುಹಾಜರಿಯನ್ನು ಗಂಭೀರವಾಗಿ ಪರಿಗಣಿಸಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ ನಿಯಮ-8(viii) ರನ್ವಯ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಆಕುಕ 227 ಎಂಎಸ್‌ಎ 2003, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-8(viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಡಾ: ಎನ್.ಎಸ್. ಪ್ರಭುದೇವ, ಹಿರಿಯ ತಜ್ಞರು, ಪ್ರಾಥಮಿಕ ಆರೋಗ್ಯ ಘಟಕ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1553

**ಆ್ಯಂಟನಿ ಮೆಂಡೋನ್ಸಾ**
ಸರ್ಕಾರದ ಉಪ ಕಾರ್ಯದರ್ಶಿ-1,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಗಣಕ ಯಂತ್ರ ಮುಂಗಡ-ಸೇವಾವಧಿಯನ್ನು ಒಂದು ಬಾರಿ ಮಂಜೂರು ಮಾಡುವ ಮಿತಿ ತೆಗೆದುಹಾಕುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಎಂಸಿ 90, ದಿನಾಂಕ: 29.5.1993.

2) ಸರ್ಕಾರಿ ಆದೇಶ ಸಂಖ್ಯೆ: ಆಇ 48 ಮಕಮು 94, ದಿನಾಂಕ: 21.10.1994.

3) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಎಹೆಚ್‌ಬಿ 99, ದಿನಾಂಕ: 18.1.1999.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 29.5.1993 ರ ಆದೇಶದಲ್ಲಿ ಕರ್ನಾಟಕ ವೃಂದ ಬಲದಲ್ಲಿ ಖಾಯಂ ಆಗಿ ಸೇರ್ಪಡೆಯಾಗಿರುವ ಅಖಿಲ ಭಾರತ ಸೇವಾಧಿಕಾರಿಗಳು ಒಳಗೊಂಡಂತೆ ರಾಜ್ಯ ಸರ್ಕಾರಿ ನೌಕರರಿಗೆ ಸ್ವಂತ ಗಣಕಯಂತ್ರ ಖರೀದಿಸುವ ಸಲುವಾಗಿ ರೂ. 50,000/- ರೂಪಾಯಿ ಅಥವಾ ಗಣಕ ಯಂತ್ರದ ಮೊತ್ತ ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಮೊತ್ತವನ್ನು ಮುಂಗಡವಾಗಿ ನೀಡುವುದಕ್ಕೆ ಮಂಜೂರಾತಿ ನೀಡಲಾಗಿತ್ತು. ಸದರಿ ಆದೇಶದಲ್ಲಿ ಇತರ ಷರತ್ತುಗಳ ಜೊತೆಗೆ ಈ ಮುಂಗಡವನ್ನು ಒಟ್ಟು ಸೇವಾವಧಿಯಲ್ಲಿ ಒಂದು ಬಾರಿಗೆ ಮಾತ್ರ ಮಂಜೂರು ಮಾಡಲಾಗುವುದೆಂಬ ಷರತ್ತನ್ನು ವಿಧಿಸಲಾಗಿತ್ತು. ಅನಂತರ ಮೇಲೆ (2) ಹಾಗೂ (3) ರಲ್ಲಿ ಓದಲಾದ ಆದೇಶಗಳಲ್ಲಿ ಪರಿಷ್ಕೃತ ವೇತನ ಶ್ರೇಣಿಗಳು ಜಾರಿಗೆ ಬಂದ ಕಾರಣ ಈ ಮುಂಗಡ ಪಡೆಯಲು ಇದ್ದ ಮೂಲ ವೇತನ ಮಿತಿಯನ್ನು ಪರಿಷ್ಕೃತಗೊಳಿಸಲಾಗಿತ್ತು. ತಾಂತ್ರಿಕತೆಯ ಶೀಘ್ರಗತಿಯ ಬೆಳವಣಿಗೆಯಿಂದಾಗಿ ಸರ್ಕಾರದ ಮುಂಗಡದಿಂದ ಪಡೆದ ಗಣಕ ಯಂತ್ರಗಳು ಅತಿ ಸ್ವಲ್ಪ ಕಾಲದಲ್ಲಿಯೇ ಹಳೆಯದಾಗಿ ಅವುಗಳು ಪ್ರಚಲಿತ ತಾಂತ್ರಿಕತೆಯಲ್ಲಿ ಸಾಕಷ್ಟು ಉಪಯೋಗವಾಗುವುದಿಲ್ಲವಾದ ಕಾರಣ, ಗಣಕ ಯಂತ್ರ ಖರೀದಿ ಮುಂಗಡ ಪಡೆದ ಸರ್ಕಾರಿ ನೌಕರರು ಮತ್ತೊಮ್ಮೆ ಹೊಸ ಗಣಕ ಯಂತ್ರ ಖರೀದಿಗೆ ಮುಂಗಡ ಪಡೆಯಲು ಅನುಕೂಲ ಮಾಡುವುದಕ್ಕಾಗಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ವಿಧಿಸಲಾಗಿರುವ ಈ ಮುಂಗಡವನ್ನು ಒಟ್ಟು ಸೇವಾವಧಿಯಲ್ಲಿ ಒಂದು ಬಾರಿ ಮಂಜೂರು ಮಾಡಲಾಗುವುದೆಂಬ ಷರತ್ತನ್ನು ಮೇಲೆ (3) ರಲ್ಲಿ ಓದಲಾದ ಆದೇಶ ಜಾರಿಗೆ ಬಂದ ದಿನಾಂಕದಿಂದ ತೆಗೆದು ಹಾಕಲು ಸರ್ಕಾರ ತೀರ್ಮಾನಿಸಿದೆ, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 24 ಮಕಮು 2003, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ನೀಡಿರುವ ವಿವರವಾದ ಕಾರಣಗಳಿಂದಾಗಿ ಗಣಕ ಯಂತ್ರ ಮುಂಗಡ ಮಂಜೂರು ಮಾಡುವ ಸಂಬಂಧ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಎಂಸಿ 90, ದಿನಾಂಕ: 29.5.1993 ರಲ್ಲಿ ಇತರ ಷರತ್ತುಗಳ ಜೊತೆ ವಿಧಿಸಲಾಗಿರುವ "ಈ ಮುಂಗಡವನ್ನು ಒಟ್ಟು ಸೇವಾವಧಿಯಲ್ಲಿ ಒಂದು ಬಾರಿ ಮಾತ್ರ ಮಂಜೂರು ಮಾಡಲಾಗುವುದು" ಎಂಬ ಷರತ್ತನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಎಹೆಚ್‌ಬಿ 1999, ದಿನಾಂಕ: 18.1.1999, ಜಾರಿಗೆ ಬಂದ ದಿನಾಂಕ: 1.1.1999 ರಿಂದ ಪೂರ್ವಾನ್ವಯವಾಗಿ ತೆಗೆದುಹಾಕಲಾಗಿದೆ. ಇನ್ನು ಮುಂದೆ ರೂ. 10500/- ಮೂಲವೇತನ ಪಡೆಯುತ್ತಿರುವ ಕರ್ನಾಟಕ ವೃಂದ ಬಲದಲ್ಲಿ ಖಾಯಂ ಆಗಿ ಸೇರ್ಪಡೆ ಹೊಂದಿರುವ ಅಖಿಲ ಭಾರತ ಸೇವೆಗಳ ಅಧಿಕಾರಿಗಳೂ ಒಳಗೊಂಡಂತೆ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಗಣಕ ಯಂತ್ರ ಖರೀದಿ ಮುಂಗಡವನ್ನು ಸೇವಾವಧಿಯಲ್ಲಿ, ಅವರು ಇಂತಹ ಮುಂಗಡವನ್ನು ಹಿಂದೆ ಪಡೆದಿದ್ದು ಅದನ್ನು ಬಡ್ಡಿ ಸಮೇತವಾಗಿ ತೀರಿಸಿ ಇದಕ್ಕೆ ಸಂಬಂಧಿಸಿದಂತೆ, ಅಂತಿಮ ತೀರುವಳಿ ಪತ್ರ ಒದಗಿಸಿದ್ದಲ್ಲಿ ಈ ಮುಂಗಡವನ್ನು ಮತ್ತೊಮ್ಮೆ ಮಂಜೂರು ಮಾಡಲು ಕೋರಿಕೆ ಸಲ್ಲಿಸಿದ್ದಲ್ಲಿ ಅದನ್ನು ಅವರಿಗೆ ಮಂಜೂರು ಮಾಡಲು ಈ ಮೂಲಕ ಸರ್ಕಾರ ಮಂಜೂರಾತಿ ನೀಡಿದೆ.

ಮೇಲೆ ತಿಳಿಸಿದ್ದನ್ನು ಹೊರತುಪಡಿಸಿ 1958ರ ಕರ್ನಾಟಕ ಆರ್ಥಿಕ ಸಂಹಿತೆಯ ಈಗಿರುವ ಇತರೆ ಎಲ್ಲಾ ಉಪಬಂಧಗಳು ಮತ್ತು ಇದಕ್ಕೆ ಸಂಬಂಧಿಸಿದ ಕಾರ್ಯ ನಿರ್ವಾಹಕ ಆದೇಶಗಳಲ್ಲಿನ ಉಪಬಂಧಗಳು ಯಾವುದೇ ಬದಲಾವಣೆ ಇಲ್ಲದೆ ಮುಂದುವರೆಯುತ್ತದೆ.

ಈ ಆದೇಶವು ದಿನಾಂಕ: 1.1.1999 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬಂದಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1554

**ಎನ್. ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ವಿಷಯ:** ಅಧಿಕಾರಿ ಸಮಿತಿ - ಸಮಿತಿಯ ಸದಸ್ಯರ ಪದನಾಮ ಮಾರ್ಪಾಡು ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2000 ದಿನಾಂಕ: 19ನೇ ಮಾರ್ಚ್ 2003.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2000, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2003**

ಮೇಲೆ ಓದಲಾದ ದಿನಾಂಕ: 19ನೇ ಮಾರ್ಚ್ 2003ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ:

"ಸರ್ಕಾರದ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಶಿಕ್ಷಣ ಇಲಾಖೆ" ಎಂಬ ಪದನಾಮವನ್ನು "ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಶಿಕ್ಷಣ ಇಲಾಖೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1555

**ಎನ್.ಟಿ. ನಾಯ್ಕ್**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು-2).

**ಆರ್ಥಿಕ ಸಚಿವಾಲಯ**

**ವಿಷಯ:** ರಾಜ್ಯ ಸರ್ಕಾರದ ಅಧಿಕಾರಿಗಳು/ರಾಜ್ಯ ಸಾರ್ವಜನಿಕ ವಲಯ ಉದ್ಯಮಗಳ ಕಾರ್ಯನಿರ್ವಾಹಕರು ಕರ್ತವ್ಯದ ಮೇಲೆ ದೇಶದಿಂದ ಹೊರಗೆ ಕೈಗೊಳ್ಳುವ ಪ್ರಯಾಣಗಳಿಗೆ ಸಂಬಂಧಪಟ್ಟಂತೆ ಪ್ರತಿದಿನದ ಭತ್ಯೆ, ಹೋಟೆಲ್ ಸ್ಥಳಾವಕಾಶ ಮತ್ತು ಇತರ ವೆಚ್ಚಗಳ ಸಂದಾಯದ ವಿನಿಯಮನ ಮಾರ್ಗದರ್ಶನ ಸೂತ್ರಗಳು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ. ಎಫ್‌ಡಿ 4 ಎಸ್‌ಆರ್‌ಎ 97, ದಿನಾಂಕ 28–4–1997.
2. ಸರ್ಕಾರಿ ಆದೇಶ ಸಂ. ಎಫ್‌ಡಿ 4 ಎಸ್‌ಆರ್‌ಎ 97, ದಿನಾಂಕ:29–8–1998.
3. ಸರ್ಕಾರಿ ಆದೇಶ ಸಂ. ಎಫ್‌ಡಿ 4 ಎಸ್‌ಆರ್‌ಎ 97, ದಿನಾಂಕ 5–1–1999.
4. ಭಾರತಸರ್ಕಾರ, ವಿದೇಶಾಂಗ ವ್ಯವಹಾರಗಳ ಮಂತ್ರಾಲಯ, ಇವರು ಹೊರಡಿಸಿದ ಆದೇಶ ಸಂಖ್ಯೆ ಕ್ಯೂ/ಎಫ್‌ಡಿ 695/3/2000, ದಿನಾಂಕ 1.12.2000.
5. ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಎಸ್‌ಆರ್‌ಎ 2001, ದಿನಾಂಕ 12.9.2001.

**ಪ್ರಸ್ತಾವನೆ:**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ಪರಿಶಿಷ್ಟ–III ರ 4 ನೇ ನಿಯಮದ ಅನುಸಾರವಾಗಿ, ವಿವಿಧ ದೇಶಗಳಿಗೆ ಮಾಡುವ ಪ್ರಯಾಣ ಮತ್ತು ತಂಗುವಿಕೆಗಳಿಗೆ ಭಾರತ ಸರ್ಕಾರವು, ಕಾಲಕಾಲಕ್ಕೆ ಗೊತ್ತುಪಡಿಸುವ ದರಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ಸರ್ಕಾರವು, ಅಧಿಕಾರಿಗಳು ಪ್ರಯಾಣ ಮಾಡುವ ದೇಶದಲ್ಲಿ ಇಳಿಯುವ ದಿನಾಂಕದಿಂದ ಪುನಃ ಭಾರತಕ್ಕೆ ಮರಳುವ ದಿನಾಂಕದವರೆಗೆ ಸಂದಾಯ ಮಾಡಬೇಕಾದ ಪ್ರಯಾಣದ ವೆಚ್ಚಗಳು ಹಾಗೂ ದಿನಭತ್ಯೆವನ್ನು ಪ್ರತಿಯೊಂದು ಸಂದರ್ಭದಲ್ಲಿಯೂ ನಿಗದಿಪಡಿಸುತ್ತದೆ. ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಸರ್ಕಾರವು, ಭಾರತ ಸರ್ಕಾರವು, ತನ್ನ ಆದೇಶ ಸಂ. ಕ್ಯೂ/ಎಫ್‌ಡಿ 695/1/90, ದಿನಾಂಕ 20–8–1996ರ ಪ್ರಕಾರ ಗೊತ್ತುಪಡಿಸಿದ ದರಗಳನ್ನು ಆಧರಿಸಿ, ರಾಜ್ಯಸರ್ಕಾರ/ಸಾರ್ವಜನಿಕ ವಲಯದ ಉದ್ಯಮಗಳ ಕಾರ್ಯನಿರ್ವಾಹಕರು ಕರ್ತವ್ಯದ ಮೇಲೆ ದೇಶದ ಹೊರಗಡೆ ಕೈಗೊಳ್ಳುವ ಪ್ರಯಾಣಗಳಿಗೆ ಪ್ರಯಾಣ ವೆಚ್ಚಗಳ ಮತ್ತು ಪ್ರತಿದಿನದ ಭತ್ಯೆಗಳ ದರಗಳನ್ನು ನಿಗದಿಪಡಿಸುತ್ತದೆ. ಉಪ ರೆಸಿಡೆಂಟ್ ಕಮೀಷನರ್, ಕರ್ನಾಟಕ ಭವನ, ನವದೆಹಲಿ, ಇವರು ತಮ್ಮ ಪತ್ರ ಸಂ. ಆರ್‌ಸಿಕೆ /ಎಎಲ್‌ಓ/2003 (47)/966, ದಿನಾಂಕ 16–7–2003ರೊಂದಿಗೆ ಮೇಲೆ (4) ರಲ್ಲಿ, ಓದಲಾದ ಭಾರತ ಸರ್ಕಾರದ ಆದೇಶ ದಿನಾಂಕ: 1–12–2000ಅನ್ನು ಒದಗಿಸಿರುತ್ತಾರೆ. ಭಾರತ ಸರ್ಕಾರವು, ಮೇಲೆ ಸಂ (4) ರಲ್ಲಿ ಓದಲಾದ 1–12–2000ದ ತನ್ನ ಆದೇಶದಲ್ಲಿ, ವಿವಿಧ ದೇಶಗಳಲ್ಲಿ ಕರ್ತವ್ಯದ ಮೇಲೆ ಕೈಗೊಳ್ಳಲಾದ ಪ್ರಯಾಣಗಳಿಗೆ ಸಂದಾಯ ಮಾಡಬೇಕಾದ ದಿನಭತ್ಯದ ದರಗಳನ್ನು ದಿನಾಂಕ 1–12–2000ದ ಭಾರತ ಸರ್ಕಾರದ ಆದೇಶದ ಅನುಬಂಧದಲ್ಲಿ ಸೂಚಿಸಿರುವಂತೆ ಪರಿಷ್ಕರಿಸಿದೆ.

ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ಪರಿಶಿಷ್ಟ –III ರ (4) ನೇ ನಿಯಮದಲ್ಲಿ ಒಳಗೊಂಡ ಉಪಬಂಧಗಳ ಹಾಗೂ ಹೊರ ದೇಶಗಳಿಗೆ ಕರ್ತವ್ಯದ ಮೇಲೆ ಕೈಗೊಳ್ಳುವ ಪ್ರಯಾಣಗಳಿಗೆ ಅನ್ವಯವಾಗುವ ದಿನಭತ್ಯದ ದರಗಳ ಸಂಬಂಧದಲ್ಲಿ ಭಾರತ ಸರ್ಕಾರವು ಮಾಡಿದ ದರಗಳ ಪರಿಷ್ಕರಣೆಯನ್ನು ದೃಷ್ಟಿಯಲ್ಲಿರಿಸಿಕೊಂಡು, ಸರ್ಕಾರವು, ಕರ್ತವ್ಯದ ಮೇಲೆ ಅಧಿಕಾರಿಗಳು ವಿದೇಶದಲ್ಲಿ ಕೈಗೊಳ್ಳುವ ಪ್ರಯಾಣಗಳಿಗೆ ಅನ್ವಯವಾಗುವ ದಿನಭತ್ಯದ ದರಗಳನ್ನು ಪರಿಷ್ಕರಿಸುವುದು ಅವಶ್ಯವೆಂದು ಪರಿಗಣಿಸಿದೆ ಮತ್ತು ಈ ಮುಂದಿನ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂ. ಎಫ್‌ಡಿ 9 ಎಸ್‌ಆರ್‌ಎ 2000, ಬೆಂಗಳೂರು, ದಿನಾಂಕ:20ನೇ ನವೆಂಬರ್ 2003.**

ರಾಜ್ಯ ಸರ್ಕಾರದ ಅಧಿಕಾರಿಗಳು ಮತ್ತು ರಾಜ್ಯ ಸಾರ್ವಜನಿಕ ವಲಯ ಉದ್ಯಮಗಳ ಇತರ ನೌಕರರು ಕರ್ತವ್ಯದ ಮೇಲೆ ಅವರು ಹೊರದೇಶಗಳಲ್ಲಿ ಕೈಗೊಳ್ಳುವ ಪ್ರಯಾಣಗಳಿಗೆ ದಿನಭತ್ಯ/ ಹೋಟೇಲಿನಲ್ಲಿಯ ಸ್ಥಳಾವಕಾಶದ ವೆಚ್ಚಗಳು / ಇತರ ವೆಚ್ಚಗಳು ಮೊದಲಾದವುಗಳನ್ನು ಸಂದಾಯ ಮಾಡುವುದಕ್ಕೆ ಸಂಬಂಧಪಟ್ಟಂತೆ ಹಿಂದಿನ ಆದೇಶಗಳು / ಸೂಚನೆಗಳನ್ನು ರದ್ದುಗೊಳಿಸಿ, ಸರ್ಕಾರವು ಈ ಮುಂದಿನ ಆದೇಶಗಳನ್ನು ಹೊರಡಿಸಿದೆ.

2. ದಿನಭತ್ಯೆ , ಹೋಟೆಲು ಬಾಡಿಗೆ ಮತ್ತು ಸ್ಥಳೀಯ ಸಾರಿಗೆ ವೆಚ್ಚಗಳಂಥ ಪ್ರತಿದಿನದ ಭತ್ಯಗಳು ಈ ಮುಂದಿನಂತೆ ಅನ್ವಯವಾಗುತ್ತವೆ :

| ಅಧಿಕಾರಿಗಳ ಪದನಾಮ | ದಿನಭತ್ಯೆ | ಹಾಸಿಗೆ ಮತ್ತು ಉಪಹಾರ ವಾಸ್ತವಿಕಗಳು ಒಳಗೊಂಡಂತೆ ಹೊಟೆಲು ಬಾಡಿಗೆ ಈ ಮುಂದಿನದ ಕ್ಕಿಂತ ಹೆಚ್ಚಾಗದಿರುವಂತೆ | ಸ್ಥಳೀಯ ಸಾರಿಗೆ ವೆಚ್ಚಗಳು |
|---|---|---|---|
| | (ಯು.ಎಸ್. ಡಾಲರುಗಳಲ್ಲಿ ಪ್ರತಿದಿನಕ್ಕೆ) | (ಯು.ಎಸ್. ಡಾಲರುಗಳಲ್ಲಿ ಪ್ರತಿದಿನಕ್ಕೆ) | (ಯು.ಎಸ್. ಡಾಲರುಗಳಲ್ಲಿ ಪ್ರತಿದಿನಕ್ಕೆ) |
| 1 | 2 | 3 | 4 |

| 1 | 2 | 3 | 4 | 1 |
|---|---|---|---|---|
| (ಎ) | 1 ನೇ ದರ್ಜೆ: ಪ್ರಧಾನ ಕಾರ್ಯದರ್ಶಿಗಳು ಮತ್ತು ಅದಕ್ಕೂ ಮೇಲ್ಪಟ್ಟ ಹುದ್ದೆಗಳಲ್ಲಿರುವ ಅಧಿಕಾರಿಗಳು/ ಸರ್ಕಾರದ ಪ್ರಧಾನ ಕಾರ್ಯದರ್ಶಿಯ ವೇತನ ಶ್ರೇಣಿಗಿಂತ ಕಡಿಮೆ ಇರದಿರುವ ಸಾರ್ವಜನಿಕ ವಲಯ ಉದ್ಯಮಗಳ ಮುಖ್ಯ ಕಾರ್ಯನಿರ್ವಾಹಕರು ಅಥವಾ ಅದರ ಅಧ್ಯಕ್ಷರು | 75<br>ಆಸ್ಟ್ರೇಲಿಯಾ ,ಆಸ್ಟ್ರಿಯ ,ಬೆಲ್ಜಿಯಂ ,ಬ್ರುನ್ಸಿ ,ಕೆನಡ, ಚೈನಾ, ಸೈಪ್ರಸ್ ,ಡೆನ್ಮಾರ್ಕ್ ,ಫಿಜಿ , ಫಿನ್ ಲ್ಯಾಂಡ್, ಫ್ರಾನ್ಸ್, ಜರ್ಮನಿ, ಝಿಬ್ರಾಲ್ಟರ್, ಗ್ರೀಸ್, ಹಾಂಗ್‌ಕಾಂಗ್, ಹೋಲಿಸೀ (ವ್ಯಾಟಿಕಾನ್) ಐಸ್ ಲ್ಯಾಂಡ್, ಐರ್ಲ್ಯಾಂಡ್, ಇಟಲಿ, ಜಪಾನ್, ಕೊರಿಯಾ (ದಕ್ಷಿಣ), ಲೀಥುವೇನಿಯಾ, ಲಾಕ್ಸಂಬರ್ಗ್ ,ಮಾಲ್ಟ ಮೈಕ್ರೋನೇಸಿಯಾ, ನೆದರ್ಲ್ಯಾಂಡ್, ನ್ಯೂಜಿಲ್ಯಾಂಡ್, ನಾರ್ವೆ, ಪಾಪ ನ್ಯೂಗಿನಿ, ಪ್ರಿನ್ಸಿಪಾಲಿಟಿ ಆಫ್ ಲಿಚ್ ಟೆನ್‌ಸ್ಟಿನ್ (ವದಸ್), ಪೋರ್ಚುಗಲ್,ರಿಪಬ್ಲಿಕ್ ಆಫ್ ಸಾಲ್ವೆನಿಯಾ, ರಿಪ್ಲಕ್ ಆಫ್ ಸಾನ್ಮೇರಿನೊ, ರೊಮೇನಿಯಾ, ಸ್ಪೇನ್, ಸ್ವೀಡನ್, ಸ್ವಿಡ್ಜರ್ಲ್ಯಾಂಡ್, ಟರ್ಕಿ, ಯು.ಕೆ. ಯು.ಎಸ್‌ಎ. –ಇವುಗಳಲ್ಲಿ .<br>56.25<br>ಇತರೆ ದೇಶಗಳಲ್ಲಿ | 250 | 25 |
| (ಬಿ) | ದರ್ಜೆ–II ರಾಜ್ಯ ಸರ್ಕಾರದ/ ಸಾರ್ವಜನಿಕ ವಲಯ ಉದ್ಯಮಗಳ ಇತರ ಅಧಿಕಾರಿಗಳು | 75<br>ಆಸ್ಟ್ರೇಲಿಯಾ, ಆಸ್ಟ್ರಿಯ, ಬೆಲ್ಜಿಯಂ, ಬ್ರುನ್ಸಿ, ಕೆನಡ, ಚೈನಾ, ಸೈಪ್ರಸ್, ಡೆನ್ಮಾರ್ಕ್, ಫಿಜಿ, ಫಿನ್ ಲ್ಯಾಂಡ್, ಫ್ರಾನ್ಸ್, ಜರ್ಮನಿ, ಝಿಬ್ರಾಲ್ಟರ್, ಗ್ರೀಸ್, ಹಾಂಗ್‌ಕಾಂಗ್, ಹೋಲಿಸೀ (ವ್ಯಾಟಿಕಾನ್), ಐಸ್ ಲ್ಯಾಂಡ್, ಐರ್ಲ್ಯಾಂಡ್, ಇಟಲಿ, ಜಪಾನ್, ಕೊರಿಯಾ (ದಕ್ಷಿಣ), ಲೀಥುವೇನಿಯಾ, ಲಾಕ್ಸಂಬರ್ಗ್, ಮಾಲ್ಟ, ಮೈಕ್ರೋನೇಸಿಯಾ, ನೆದರ್ಲ್ಯಾಂಡ್, ನ್ಯೂಜಿಲ್ಯಾಂಡ್, ನಾರ್ವೆ, ಪಾಪುವ ನ್ಯೂಗಿನಿ, ಪ್ರಿನ್ಸಿಪಾಲಿಟಿ ಆಫ್ ಲಿಚ್ ಟೆನ್‌ಸ್ಟಿನ್ (ವದಸ್), ಪೋರ್ಚುಗಲ್, ರಿಪಬ್ಲಿಕ್ ಆಫ್ ಸಾಲ್ವೆನಿಯಾ,ರಿಪ್ಲಕ್ ಆಫ್ ಸಾನ್ಮೇರಿನೊ, ರೊಮೇನಿಯಾ, ಸ್ಪೇನ್, ಸ್ವೀಡನ್, ಸ್ವಿಡ್ಜರ್ಲ್ಯಾಂಡ್, ಟರ್ಕಿ, ಯು.ಕೆ. ಯು.ಎಸ್‌ಎ.– ಇವುಗಳಲ್ಲಿ .<br>56.25<br>ಇತರೆ ದೇಶಗಳಲ್ಲಿ | 175 | 25 |

ಅಧಿಕಾರಿಗಳು, ತಮ್ಮ ವಿದೇಶ ಪ್ರಯಾಣದ ಅವಧಿಯಲ್ಲಿ ತುರ್ತು ಸರ್ಕಾರಿ ಕೆಲಸಕ್ಕಾಗಿ ಮಾಡಿದ ಐಎಸ್‌ಡಿ ಕರೆಗಳು/ ಫ್ಯಾಕ್ಸ್ ಇವುಗಳಿಗೆ ತಗುಲಿದ ವಾಸ್ತವ ವೆಚ್ಚವನ್ನು ತುಂಬಿಕೊಡುವಂತೆ ಕೋರಬಹುದು.

3. ಪ್ರತಿನಿಯೋಜನೆಯ ಮೇಲೆ ಇರುವವರೂ ಸೇರಿದಂತೆ ಸರ್ಕಾರಿ ಅಧಿಕಾರಿಗಳು/ ಸಾರ್ವಜನಿಕ ವಲಯದ ಉದ್ಯಮಗಳ ಅಧಿಕಾರಿಗಳು ಮಾಡುವ ವಿದೇಶ ಪ್ರಯಾಣಕ್ಕೆ ಸಂಬಂಧಿಸಿದಂತೆ, ಸಕ್ಷಮ ಪ್ರಾಧಿಕಾರದ ಸೂಕ್ತ ಅನುಮೋದನೆ ಕೋರುವ ಬಗೆಗಿನ ಈಗಿರುವ ಕಾರ್ಯವಿಧಾನ ಮುಂದುವರಿಯುವುದು.

4. ಪದನಿಮಿತ್ತ ಸಾಮರ್ಥ್ಯದಲ್ಲಿ ಸೇವೆ ಸಲ್ಲಿಸುತ್ತಿರುವ ಸಾರ್ವಜನಿಕ ವಲಯದ ಉದ್ಯಮಗಳ ಮಂಡಲಿಗಳಲ್ಲಿರುವ ಸರ್ಕಾರಿ ಅಧಿಕಾರಿಗಳನ್ನು , ಈ ಸರ್ಕಾರಿ ಆದೇಶದ ಉದ್ದೇಶಕ್ಕಾಗಿ ಸರ್ಕಾರಿ ನೌಕರರೆಂದು ಪರಿಗಣಿಸಲಾಗುವುದೇ ವಿನಃ ಸಾರ್ವಜನಿಕ ವಲಯದ ಉದ್ಯಮಗಳ ನೌಕರರೆಂದು ಅಲ್ಲ.

5. ನಿಯೋಗದ ಒಂದು ಭಾಗವಾಗಿ ಮಾನ್ಯ ಮುಖ್ಯ ಮಂತ್ರಿಗಳು ಅಥವಾ ಮಂತ್ರಿಗಳೊಂದಿಗೆ ಬರುವ ಸಾರ್ವಜನಿಕ ವಲಯದ ಉದ್ಯಮಗಳ ಮುಖ್ಯ ಕಾರ್ಯನಿರ್ವಾಹಕರು ಮಾನ್ಯ ಮುಖ್ಯಮಂತ್ರಿಗಳು ಅಥವಾ ಮಂತ್ರಿಗಳು ತಂಗುವ ಹೋಟೇಲ್ ನಲ್ಲಿಯೇ ತಂಗಿದರೆ ಹೋಟೇಲ್ ನಲ್ಲಿಯ ಸ್ಥಳಾವಕಾಶಕ್ಕಾಗಿ ಅವರಿಗೆ ತಗುಲಿದ ವಾಸ್ತವ ವೆಚ್ಚವನ್ನು ತುಂಬಿಕೊಡತಕ್ಕದ್ದು. ಮುಖ್ಯ ಕಾರ್ಯನಿರ್ವಾಹಕರು, ಮಾನ್ಯ ಮುಖ್ಯಮಂತ್ರಿಗಳಿಗೆ ಅಥವಾ ಮಂತ್ರಿಗಳಿಗೆ ಒದಗಿಸಲಾದ ಸ್ಥಳಾವಕಾಶದಂಥದೇ ಮಾದರಿಯ ಕೊಠಡಿಗಳಲ್ಲಿ ಉಳಿದುಕೊಳ್ಳುವುದಿಲ್ಲ ಎಂದು ಖಚಿತಪಡಿಸತಕ್ಕದ್ದು.

6. ಈ ಆದೇಶಗಳ ಜಾರಿಗೆ ಸಂಬಂಧಿಸಿದ ಮಾರ್ಗದರ್ಶನ ಸೂತ್ರಗಳನ್ನು ಈ ಆದೇಶಕ್ಕೆ ಅನುಬಂಧಿಸಲಾಗಿದೆ.
7. ಈ ಆದೇಶಗಳು ಕೂಡಲೇ ಜಾರಿಯಲ್ಲಿ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ಗೋಪಾಲಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–1)

**ಅನುಬಂಧ**

**ರಾಜ್ಯ ಸರ್ಕಾರದ ಮತ್ತು ಸಾರ್ವಜನಿಕ ವಲಯದ ಉದ್ಯಮಗಳ ನೌಕರರ ವಿದೇಶ ಪ್ರಯಾಣಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 9 ಎಸ್‌ಆರ್‌ಎ 2000, ದಿನಾಂಕ 20.11.2003 ಕ್ಕೆ ಪೂರಕ ಮಾರ್ಗದರ್ಶನ ಸೂತ್ರಗಳು.**

1. ಹೋಟೆಲ್‌ನಲ್ಲಿ ಸ್ಥಳಾವಕಾಶ ಒದಿಗಿಸಿದ ಬಗ್ಗೆ ತಗುಲಿದ ವಾಸ್ತವಿಕ ವೆಚ್ಚಕ್ಕೆ ಸಂಬಂಧಿಸಿದಂತೆ, ವೋಚರುಗಳನ್ನು ಹಾಜರುಪಡಿಸಿದ ಮೇಲೆ ಸರ್ಕಾರಿ ಆದೇಶದ ಅಡಿಯಲ್ಲಿ ನಿಯಮಿಸಲಾದ ಮಿತಿಗಳಿಗೆ ಒಳಪಟ್ಟು ವಾಸ್ತವಿಕ ವೆಚ್ಚವನ್ನು ತುಂಬಿಕೊಡಲಾಗುವುದು.
2. ಅಧಿಕಾರಿಯು ತಂಗುವುದಕ್ಕೆ ತನ್ನದೇ ಆದ ಸ್ವಂತ ವ್ಯವಸ್ಥೆಯನ್ನು ಮಾಡಿಕೊಂಡಿದ್ದರೆ ಅಥವಾ ಅವನಿಗೆ ಉಚಿತ ಸ್ಥಳಾವಕಾಶ ಒದಗಿಸಿದ್ದರೆ, ಅವನು ದಿನಭತ್ಯ ಮಾತ್ರ ಪಡೆಯುತ್ತಾನೆಯೇ ವಿನಃ ಹೋಟೆಲು ಬಾಡಿಗೆ ಅಲ್ಲ.
3. ಮುಂಗಡಗಳನ್ನು, ನಿಯಮಗಳ ಅನುಸಾರ ಪಡೆದುಕೊಳ್ಳಬಹುದು ಮತ್ತು ಹಿಂದಿರುಗಿ ಬಂದ ತರುವಾಯ ನಿಯತ ಪ್ರಯಾಣ ಭತ್ಯೆಯ ಬಿಲ್ಲುಗಳನ್ನು ಸಲ್ಲಿಸಬೇಕು.
4. ನೌಕರನನ್ನು ರಾಜ್ಯದ ಅತಿಥಿ ಎಂದು ಪರಿಗಣಿಸಲಾಗಿರುವಲ್ಲಿ ಮತ್ತು ಅವನಿಗೆ ಉಚಿತ ಊಟ ಮತ್ತು ವಸತಿಯನ್ನು ಒದಗಿಸಲಾಗಿರುವಲ್ಲಿ, ಅವನು, ಅಂಗೀಕಾರಾರ್ಹವಿರುವ ದಿನಭತ್ಯೆಯ ಶೇ. ಇಪ್ಪತ್ತೈದರಷ್ಟನ್ನು (ಶೇ 25) ಮಾತ್ರ ಪಡೆಯಲು ಹಕ್ಕುಳ್ಳವನಾಗಿರುತ್ತಾನೆ.
5. ಬಕ್ಷೀಸು (ಟಿಪ್ಸ್) ಎಂದು ಮಾಡಲಾದ ಯಾವುದೇ ವೆಚ್ಚವನ್ನು ತುಂಬಿಕೊಡಲಾಗುವುದಿಲ್ಲ.
6. ವಿಮಾನ ನಿಲ್ದಾಣ ತೆರಿಗೆಗಳು / ಸರ್ ಚಾರ್ಜುಗಳನ್ನು ಸಂದಾಯ ಮಾಡಿದ್ದರೆ, ಅಗತ್ಯ ವೋಚರುಗಳನ್ನು ಹಾಜರುಪಡಿಸಿದ ಮೇಲೆ ಸಂದಾಯ ಮಾಡಿರುವ ವಾಸ್ತವಿಕ ಹಣವನ್ನು ತುಂಬಿಕೊಡಲಾಗುವುದು.
7. ವ್ಯಾಪಾರ ನಿಯೋಗದ ಪ್ರವಾಸಗಳ ಸಂದರ್ಭದಲ್ಲಿ , ಮನರಂಜನಾ ಮುಂಗಡವನ್ನು, ರಾಜ್ಯ ಸರ್ಕಾರದಿಂದ ಪಡೆದ ನಿರ್ದಿಷ್ಟ ಮಂಜೂರಾತಿಗೆ ಅನುಸಾರವಾಗಿ ನಿಯೋಗದ ಮುಖಂಡನಿಗೆ ಸಂದಾಯ ಮಾಡಲಾಗುವುದು. ಮಂಜೂರಾದ ಗರಿಷ್ಠ ಮನರಂಜನಾ ಮುಂಗಡವು, 1000 ಯುಎಸ್ ಡಾಲರನ್ನು (ಒಂದು ಸಾವಿರ ಮಾತ್ರ) ಮೀರತಕ್ಕದ್ದಲ್ಲ, ಮತ್ತು ಅದನ್ನು ಅಗತ್ಯ ವೋಚರುಗಳನ್ನು ಹಾಜರುಪಡಿಸಿದ ಮೇಲೆ ಹೊಂದಾಣಿಕೆ ಮಾಡಲಾಗುವುದು.
8. ಸ್ಥಳೀಯ ಚಲಾವಣೆ ಹಣವು ಸುಲಭವಾಗಿ ಪರಿವರ್ತನೆ ಮಾಡಬಹುದಾದ ದೇಶಗಳ ಸಂದರ್ಭದಲ್ಲಿ, ಯುಎಸ್ ಡಾಲರ್‌ನಲ್ಲಿರುವ ದಿನಭತ್ಯೆಯನ್ನು ಸ್ಥಳೀಯ ಚಲಾವಣೆ ಹಣದ ರೂಪದಲ್ಲಿ ಸಂದಾಯ ಮಾಡಬಹುದು. ಸ್ಥಳೀಯ ಚಲಾವಣೆ ಹಣಕ್ಕೆ ಸಮನಾದ ಹಣವನ್ನು, ಭಾರತ ಸರ್ಕಾರದ ಹಣಕಾಸು ಮಂತ್ರಾಲಯವು ಕಾಲಕಾಲಕ್ಕೆ ನಿಗದಿಪಡಿಸಬಹುದಾದ ಸರ್ಕಾರಿ ವಿನಿಮಯ ದರಗಳನ್ನು ಗಣನೆಗೆ ತೆಗೆದುಕೊಂಡು ರೂಪಾಯಿ ಮೌಲ್ಯವನ್ನು ನಿಗದಿಪಡಿಸುವುದು. ಸ್ಥಳೀಯ ಚಲಾವಣೆ ಹಣವು ಸುಲಭವಾಗಿ ಪರಿವರ್ತನೆ ಮಾಡಲಾಗದ ದೂತವರ್ಗಗಳ ಸಂಬಂಧದಲ್ಲಿ ನಿಯಮಿಸಲಾದ ದಿನಭತ್ಯೆಯನ್ನು ಯುಎಸ್ ಡಾಲರುಗಳಲ್ಲಿ ಸಂದಾಯ ಮಾಡಲಾಗುವುದು.
9. ಅಪರ ಮುಖ್ಯ ಕಾರ್ಯದರ್ಶಿಗಳು, ಪೊಲೀಸು ಮಹಾ ನಿರ್ದೇಶಕರು, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಕರು ಮತ್ತು ಅದಕ್ಕೂ ಮೇಲ್ಪಟ್ಟ ದರ್ಜೆಯ ಅಧಿಕಾರಿಗಳಿಗೆ ಎಕ್ಸಿಕ್ಯೂಟಿವ್ ದರ್ಜೆ/ಬಿಸಿನೆಸ್ ದರ್ಜೆಯಲ್ಲಿ ಪ್ರಯಾಣ ಮಾಡಲು ಅನುಮತಿಸಲಾಗಿದೆ. ಇತರ ಅಧಿಕಾರಿಗಳು ಮಿತವ್ಯಯ (ಎಕಾನಮಿ) ದರ್ಜೆಯಲ್ಲಿ ಪ್ರಯಾಣ ಮಾಡತಕ್ಕದ್ದು.
10. ಏರ್ ಇಂಡಿಯಾ ವಿಮಾನಗಳು ಸಂಚರಿಸುವ ಕಡೆಗಳೆಲ್ಲಾ, ವಿಮಾನ ಪ್ರಯಾಣವನ್ನು ಸಾಮಾನ್ಯವಾಗಿ, ಅದರಲ್ಲೇ ಮಾಡಬೇಕು. ಏರ್ ಇಂಡಿಯಾ ವಿಮಾನಗಳು ಸಂಚರಿಸದಿರುವ ಕಡೆಗಳಲ್ಲಿ ಅಥವಾ ನೌಕರರು ಗಮ್ಯ ಸ್ಥಾನವನ್ನು ಸಕಾಲಕ್ಕೆ ತಲುಪಲು ಸಾಧ್ಯವಾಗದಿರುವ ಕಡೆಗಳಲ್ಲಿ ಮಾತ್ರ ಇತರ ವಿಮಾನಗಳನ್ನು ಬಳಸಬಹುದು.

**ಕೆ.ಎಸ್. ಗೋಪಾಲಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–1).

**FINANCE SECRETARIAT**

**Sub:** Regulation of payment of per diem and guidelines governing Hotel accommodation and other expenditure for journeys undertaken on duty outside the country by officers of the State Government / Executives of States PSEs.

**Read :** 1 Government Order No. FD 4 SRA 97, dated 28.4.1997.
2 Government Order No. FD 4 SRA 97, dated 29.8.1998.

3 Government Order No. FD 4 SRA 97, dated 5.1.1999.
4 Order No. Q/FD 695/3/2000, dated 1.12.2000 from Government of India, Ministry of External Affairs.
5 Government Order No. FD 7 SRA 2001, dated 12.9.2001.

**Preamble:**

According to Rule 4 of Appendix-III of Karnataka Civil Services Rules the traveling expenses and daily allowance payable to the officers from the date of landing in the country of destination to the date of re-embarkation for India will be fixed by the Government in each case, keeping in view the rates which are fixed by Government of India from time to time for journeys and halts in the various countries. In the Government Order dated 28.4.1997 read at (1) above, Government had fixed the rates of traveling expenses and per diem allowances for journeys undertaken on duty outside the country by officers of the State Government / Executives of Public Sector Enterprises based on the rates fixed by Government of India vide their Order No.Q/FD.695/1/90, dated 20.8.1996. The Deputy Resident Commissioner, Karnataka Bhavan, New Delhi vide his letter No.RCK/ALO/2003 (47) /966, dated 16.7.2003 has made available the Government of India Order dated 1.12.2000 read at (2) above. Government of India in their order dated 1.12.2000 read at (2) above have revised the rates of Daily Allowance payable for journeys on duty in various countries abroad vide Annexture to Government of India Order dated 1.12.2000.

Therefore, in view of the provisions contained in Rule (4) of Appendix – III of Karnataka Civil Service Rules as also the revision effected by the Government of India in respect of rates of daily allowance admissible for journeys on duty abroad, Government consider it necessary to revise the rates of daily allowance admissible to officers for journeys on duty abroad and issue the following order.

**GOVERNMENT ORDER NO. FD 9 SRA 2000, BANAGALORE, DATED : 20TH NOVEMBER 2003**

In supersession of the earlier orders / instructions regarding the payment of Daily Allowance / Hotel accommodation expenses / other expenses etc; in respect of State Government Officers and other officials of the State Public Sector Enterprises, for journeys undertaken by them outside the country, Government are pleased to issue the following orders.

2. The per diem allowances like Daily Allowance, Hotel rentals and Local Transport Charges are admissible as follows:

| Designation Of The Officers | D.A | Hotel Rentals Including Bed And Breadkfast-Actuals Not Exceeding | Local Transport Charges |
|---|---|---|---|
| | (in US Dollars per diem) | (in US Dollars per diem) | (in US Dollars per diem) |
| 1 | 2 | 3 | 4 |
| (A). Grade I<br>Officers of the rank of Principal Secretaries & above/Chief Executives or Chairman of PSUs where pay scales are not less than that of a Principal Secretary to Government | 75<br>in<br>Australia, Austria, Belgium, Brunci, Canada, China, Cyprus, Denmark, Fiji, Finland, France, Germany, Gibraltar, Greece, Hong Kong, Holy Sce (Vatican), Iceland, Ireland, Italy, Japan, Korea (South), Lithuania, Luxembourg, Malta, Micronesia, Netherland, New Zealand, Norway, Papua New Guinca, Principality of Licchtenstcin (Vaduz), Portugal, Republic of Solvenia, Republic of San Marino, Romania, Spain, Sweden, Switzerland, Turkey, U.K., U.S.A<br>56.25<br>in other countries | 250 | 25 |
| (B) Grade II<br>Other Officers of State Govt; / P.S.Es | 75<br>in<br>Australia, Austria, Belgium, Brunci, Canada, China, Cyprus, Denmark, Fiji, Finland, France, Germany, Gibraltar, Greece, Hong Kong, Holy | 175 | 25 |

| 1 | 2 | 3 | 4 |
|---|---|---|---|
| | Sce (Vatican), Iceland, Ireland, Italy, Japan, Korea (South), Lithuania, Luxembourg, Malta, Micronesia, Netherland, New Zealand, Norway, Papua New Guinca, Principality of Licchtenstcin (Vaduz), Portugal, Republic of Solvenia, Republic of San Marino, Romania, Spain, Sweden, Switzerland, Turkey, U.K., U.S.A<br>56.25<br>in other countries | | |

Officers may also claim reimbursement of actual expenditure incurred on ISD Calls / Fax made for urgent official work during their travel abroad.

3. In respect of foreign travel by Government Officers / Officers of P.S.Es including those on deputation, existing procedure for seeking appropriate approvals from competent authority will continue.

4. Government Officers on the Boards of PSEs in Ex-Officio capacity will be treated as Government Officials only and not as PSE Officials for the purpose of this Government Order.

5. Chief Executives of State Public Sector Enterprises who form part of the delegation led by the Hon'ble Chief Minister or Minister shall be reimbursed the actual expenditure incurred by them on hotel accommodation when they stay in the same hotel in which the Hon'ble Chief Minister or Minister stays. The Chief Executives should ensure that they do not stay in the same type of rooms in which the Hon'ble Chief Minister or Minister is accommodated.

6. Guidelines for the implementation of these orders are Annexed to this order.

7. These orders come into force with immediate effect.

By Order and in the name of the Governor of Karnataka

**K.S.GOPALA KRISHNA**

Under Secretary to Government,

Finance Department(Services-1).

**ANNEXURE**

**Supplementary Guidelines to Government Order No. FD 9 SRA 2000, dated 20.11.2003 relating to travel abroad by officials of State Government & PSEs.**

1. Hotel Accommodation expenditure will be reimbursed as per actual subject to the limits prescribed under this Government Order on production of vouchers.
2. In cases where an officer makes his own arrangement for stay or accommodation is provided free of cost, he will get ONLY the Daily Allowance and not hotel rentals.
3. Advances may be drawn as per rules and regular TA bills submitted on return.
4. Where an official is treated as State Guest and provided free board and lodging, he will be entitled only to twenty five percent (25%) of the admissible Daily Allowance.
5. No expenditure on tips will be reimbursed.
6. Airport taxes / surcharges, if paid, will be reimbursed at actual on production of necessary vouchers.
7. In case of trips of a business delegation entertainment advance may be paid to the leader of the delegation in accordance with specific sanction from the State Government. The maximum entertainment advance sanctioned shall not exceed US Dollar 1000 (One thousand only), to be adjusted against production of necessary vouchers.
8. In case of countries, where local currencies are freely convertible, the DA entitlement in US Dollars may be paid in local currency. The local currency equivalent may be arrived at via Rupee, by using the official rates of exchange fixed by the Ministry of Finance, Government of India, from time to time. In the case of missions where local currencies are not freely convertible, the prescribed DA will be paid in US Dollars.
9. Officers of the rank of Additional Chief Secretaries, Directors General of Police, Principal Chief Conservator of Forest and above are permitted to travel by Executive Class / Business Class. Other officers should travel by Economy Class.
10. Air travel should normally be by Air India Flights wherever it is operating. Only in cases where Air India is not operating or Officials cannot reach in time, other Airlines could be used.

**K.S.GOPALA KRISHNA**

PR-1545

Under Secretary to Government,

Finance Department (Services-1).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಎಸ್.ಎನ್.ಬೀಡಿ, (ನಿವೃತ್ತ) ವೈದ್ಯಾಧಿಕಾರಿ, ಮತ್ತು ಶ್ರೀ ಎಂ.ಕೆ.ನಾಯಕ್, ಪ್ರಥಮ ದರ್ಜೆ ಸಹಾಯಕರು, ಪ್ರಾ.ಅ.ಕೇಂದ್ರ, ಕ್ಯಾದಗಿ, ಸಿದ್ದಾಪುರ ತಾಲ್ಲೂಕು, ಇವರುಗಳು ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವ ಆಪಾದನೆಗೆ ಕಠಿಣ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಕುಕ 126 ಎಂಎಸ್ಎ 88 ದಿನಾಂಕ: 8/7/1993.
2) ಡಾ: ಎಸ್.ಎನ್.ಬೀಡಿ ಅವರ ರಕ್ಷಣಾ ಹೇಳಿಕೆ ದಿನಾಂಕ: 29/12/1993.
3) ಶ್ರೀ ಎಂ.ಕೆ.ನಾಯಕ್, ಅವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 18/11/1993.
4) ಸರ್ಕಾರದ ಆದೇಶ ಸಂಖ್ಯೆ: ಆಕುಕ 126 ಎಂಎಸ್ಎ 88 ದಿನಾಂಕ: 27/8/1994.
5) ಸರ್ಕಾರದ ಪತ್ರ ಸಂಖ್ಯೆ: ಆಕುಕ 126 ಎಂಎಸ್ಎ 88 ದಿನಾಂಕ: 24/9/1994.
6) ಸರ್ಕಾರದ ಆದೇಶ ಸಂಖ್ಯೆ: ಆಕುಕ 126 ಎಂಎಸ್ಎ 88 ದಿನಾಂಕ: 27/6/1997
7) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ ಎಆರ್–5/8/87 ದಿನಾಂಕ: 7/3/2002.
8) ಎರಡನೇ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 126 ಎಂಎಸ್ಎ 88 ದಿನಾಂಕ: 10/1/2003.
9) ಶ್ರೀ ಎಂ.ಕೆ.ನಾಯಕ್, ಅವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 5/2/2003.

**ಪ್ರಸ್ತಾವನೆ:**

ಡಾ: ಎಸ್.ಎನ್.ಬೀಡಿ, (ನಿವೃತ್ತ) ವೈದ್ಯಾಧಿಕಾರಿ, ಮತ್ತು ಶ್ರೀ ಎಂ.ಕೆ.ನಾಯಕ್, ಪ್ರಥಮ ದರ್ಜೆ ಸಹಾಯಕರು, ಪ್ರಾ.ಅ.ಕೇಂದ್ರ, ಕ್ಯಾದಗಿ, ಸಿದ್ದಾಪುರ ತಾಲ್ಲೂಕು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸರ್ಕಾರದ ಹಣ ದುರುಪಯೋಗ ಮಾಡಿರುವ ಬಗ್ಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಇವರುಗಳಿಗೆ ಷೋಕಾಸ್ ನೋಟೀಸನ್ನು ದೋಷಾರೋಪಣೆ ಪಟ್ಟಿಯೊಂದಿಗೆ ಆರೋಪಿತರಿಗೆ ಜಾರಿ ಮಾಡಿ, ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ಡಾ: ಎಸ್.ಎನ್.ಬೀಡಿ ಅವರು ಮೇಲೆ (2) ದಿನಾಂಕ: 29/12/1993 ರಂದು ಸರ್ಕಾರಕ್ಕೆ ಲಿಖಿತ ಹೇಳಿಕೆ ಸಲ್ಲಿಸಿ, ಹೊರಿಸಲಾದ ಆರೋಪಗಳನ್ನು ನಿರಾಕರಿಸುವಂತೆ ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ಶ್ರೀ ಎಂ.ಕೆ.ನಾಯಕ್, ಅವರು ಪ್ರತಿ ರಕ್ಷಣಾ ಹೇಳಿಕೆಯಲ್ಲಿ ತಮ್ಮ ಮೇಲೆ ಆರೋಪಿಸಿರುವ ಎಲ್ಲಾ ಆಪಾದನೆಗಳನ್ನು ಒಪ್ಪಿಕೊಳ್ಳದೆ ಕರ್ತವ್ಯಚ್ಯುತಿ ಇಲ್ಲದಿರುವುದರಿಂದ ಆಪಾದನೆಗಳನ್ನು ಅಲ್ಲಗಳೆದಿದ್ದಾರೆ. ಮೇಲೆ (4) ರಲ್ಲಿ ಓದಲಾದ ಆದೇಶದಲ್ಲಿ ಆಪಾದಿತರುಗಳಿಗೆ ಜಾರಿ ಮಾಡಲಾಗಿರುವ ಆರೋಪಗಳ ಬಗ್ಗೆ ನೀಡಿರುವ ರಕ್ಷಣಾ ಹೇಳಿಕೆಯಲ್ಲಿ ಆರೋಪಗಳನ್ನು ನಿರಾಕರಿಸಿ ವಿವರಣೆ ಸಲ್ಲಿಸಿರುವುದನ್ನು ಸರ್ಕಾರವು ಪರಿಶೀಲಿಸಿದ ನಂತರ ಈ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ, ನಿಯಮ – 11 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಅಡಿಷನಲ್ ರಿಜಿಸ್ಟ್ರಾರ್ (ವಿಚಾರಣೆ–4) ಅವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ – 11 ರ ಉಪ ನಿಯಮ (5) (ಸಿ) ರಡಿಯಲ್ಲಿ ಅಡಿಷನಲ್ ರಿಜಿಸ್ಟ್ರಾರ್ (ವಿಚಾರಣೆ–4) ಅವರಿಗೆ ಹೊಂದಿಕೊಂಡ ಅಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಿದೆ.

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಇಬ್ಬರೂ ಆಪಾದಿತರುಗಳ ವಿರುದ್ಧ ವಿಚಾರಣೆ ನಡೆಸಲು ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಅಡಿಷನಲ್ ರಿಜಿಸ್ಟ್ರಾರ್ (ವಿಚಾರಣೆ–4) ಇವರಿಗೆ ಕಳುಹಿಸಲಾಗಿತ್ತು. ಅವರ ಬದಲಿಗೆ ಅಡಿಷನಲ್ ರಿಜಿಸ್ಟ್ರಾರ್ (ವಿಚಾರಣೆ–5) ಅವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ಹಾಗೂ ಅವರಿಗೆ ಸಂಬಂಧಿಸಿದ ಅಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ (6) ರಲ್ಲಿ ಓದಲಾದ ಆದೇಶದಲ್ಲಿ ನೇಮಕ ಮಾಡಲಾಗಿದೆ. ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಮೇಲೆ (7) ರಲ್ಲಿ ಓದಲಾದ ಪತ್ರದೊಂದಿಗೆ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ವಿಚಾರಣಾ ವರದಿಯಲ್ಲಿ, ಆಪಾದಿತರ ಮೇಲೆ ಹೊರಿಸಲಾದ ಎಲ್ಲಾ ಆರೋಪಗಳು ಸಾಬೀತಾಗಿರುವುದಾಗಿ ವರದಿ ನೀಡಿದ್ದು ಸದರಿ ವರದಿಯನ್ನು ಆಪಾದಿತರಿಗೆ ಜಾರಿ ಮಾಡಿ ಸದರಿ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ಹೇಳುವುದೇನಾದರೂ ಇದ್ದಲ್ಲಿ ಲಿಖಿತದ ಮೂಲಕ ಸರ್ಕಾರಕ್ಕೆ ಸಲ್ಲಿಸುವಂತೆ ಮೇಲೆ (8) ರಲ್ಲಿ ಕೋರಲಾಗಿತ್ತು. ಅದರನ್ವಯ ಆರೋಪಿತರು ಅವರುಗಳ ಅಹವಾಲುಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಆಪಾದಿತರಿಬ್ಬರೂ ಸಲ್ಲಿಸಿರುವ ಹೇಳಿಕೆಗಳಲ್ಲಿ ಆರೋಪಗಳನ್ನು ನಿರಾಕರಿಸಿದ್ದರು. ಆಪಾದಿತರುಗಳ ಹೇಳಿಕೆಗಳು ಪರಿಗಣಿಸಲು ಯೋಗ್ಯವಾಗಿರಲಿಲ್ಲ. ಇದೊಂದು ರೂ.2,52,786/66 ಹಣ ದುರುಪಯೋಗದ ಗಂಭೀರ ಪ್ರಕರಣ. ಉತ್ತರ ಕನ್ನಡ ಜಿಲ್ಲೆಯ ಕ್ಯಾದಗಿ ಪ್ರಾ.ಆ.ಕೇಂದ್ರದಲ್ಲಿ ಹಣ ದುರುಪಯೋಗಕ್ಕೆ ಕಾರಣರಾದ ಡಾ: ಎಸ್.ಎನ್.ಬೀಡಿ, ವೈದ್ಯಾಧಿಕಾರಿ ಮತ್ತು ಶ್ರೀ ಎಂ.ಕೆ.ನಾಯ್ಕ, ಪ್ರ.ದ.ಸಹಾಯಕರು ಅಪಾದಿತರಿಬ್ಬರೂ ಪರಸ್ಪರ ಅಪಾದನೆಗಳನ್ನು ಮಾಡಿ ಪರಿಗಣಿಸಲು ಯೋಗ್ಯವಲ್ಲವೆಂದು ಸಬೂಬುಗಳನ್ನು ನೀಡಿರುತ್ತಾರೆ.

ಆಪಾದಿತರ ಮೇಲೆ ಮಾಡಲಾದ ಹಲವಾರು ಆರೋಪಗಳಲ್ಲಿ ಹೆಚ್ಚಿನ ಆರೋಪಗಳೆಲ್ಲಾ ಹಣಕಾಸಿನ ದುರುಪಯೋಗಕ್ಕೆ ಸಂಬಂಧಪಟ್ಟವುಗಳು. ಕೆಲವು ಆರೋಪಗಳು ಮಾತ್ರ ಅಧಿಕಾರ ದುರುಪಯೋಗ ಹಾಗೂ ಸರ್ಕಾರದ ನಿಯಮಗಳ ಉಲ್ಲಂಘನೆಗೆ ಸಂಬಂಧಪಟ್ಟದ್ದು. ವಿಚಾರಣಾಧಿಕಾರಿಗಳ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಈ ಕೆಳಕಂಡಂತೆ ಆರೋಪಗಳು ಸಂಪೂರ್ಣವಾಗಿ ಸಾಬೀತಾಗಿದ್ದು ಸರ್ಕಾರಕ್ಕೆ ಲಕ್ಷಗಟ್ಟಲೆ ನಷ್ಟ ಉಂಟಾಗಿದೆ. ಸಂಕ್ಷಿಪ್ತ ವಿವರ ಈ ರೀತಿ ಇದೆ.

**ಆರೋಪ:1** ಆರೋಗ್ಯ ಸಹಾಯಕ (ಪುರುಷ) ಮತ್ತು ಕಿರಿಯ ಆರೋಗ್ಯ ಸಹಾಯಕ (ಪುರುಷ) ಇವರಿಗೆ ಕಾನೂನು ಬಾಹಿರವಾಗಿ ವಿಶೇಷ ಭತ್ಯೆ ನೀಡಿ ರೂ. 14,543–90 ನಷ್ಟ ಉಂಟು ಮಾಡಿದ್ದಾರೆ.

**ಆರೋಪ:2** ನಾಲ್ಕು ಜನ ಕಿರಿಯ ಆರೋಗ್ಯ ಸಹಾಯಕ (ಪುರುಷ) ರಿಗೆ ಕಾನೂನು ಬಾಹಿರವಾಗಿ ವೇತನ ಬಡ್ತಿ ನೀಡಿ, ಹಾಗೂ ಹಿಂದಿನ ವೇತನ ಪಾವತಿ ಮಾಡಿ ರೂ. 50,390–60 ಗಳನ್ನು ಸರ್ಕಾರದ ಹಣ ದುರುಪಯೋಗ ಮಾಡಿದ್ದಾರೆ.

**ಆರೋಪ:3** ಸರ್ಕಾರಿ ರಜಾ ದಿನಗಳಲ್ಲಿ ಕೆಲಸ ಮಾಡಿದ ಕಿರಿಯ/ಹಿರಿಯ ಆರೋಗ್ಯ ಸಹಾಯಕರು (ಮಹಿಳೆ) ರಿಗೆ ಕಾನೂನು ಬಾಹಿರವಾಗಿ 15 ದಿನಗಳಿಗೆ ವಿಶೇಷ ರಜಾ ಸಂಬಳ ಮಂಜೂರು ಮಾಡಿ ರೂ. 12,496/45 ನಷ್ಟ ಉಂಟು ಮಾಡಿದ್ದಾರೆ.

**ಆರೋಪ:4** ಗ್ರೂಪ್–ಡಿ ನೌಕರರಿಗೆ ಕಾನೂನು ಬಾಹಿರವಾಗಿ ವಿಶೇಷ ವೇತನವನ್ನು ಮಂಜೂರು ಮಾಡಿರುವುದು.

**ಆರೋಪ:5** ಆರೋಗ್ಯ ಸಹಾಯಕರಿಗೆ ಕಾನೂನು ಬಾಹಿರವಾಗಿ ಹೆಚ್ಚುವರಿ ಸಂಬಳ ನಿಗದಿಪಡಿಸಿ, ರೂ. 1,38,915/40 ಹಿಂದಿನ ಬಾಕಿ ಪಾವತಿ ಮಾಡಿರುವುದು.

**ಆರೋಪ:6** ಶ್ರೀ ವಿ.ಹೆಚ್. ಪೈ, ಹಿರಿಯ ಆರೋಗ್ಯ ಪರಿವೀಕ್ಷಕರು, ಶ್ರೀ ಬಿ.ಸಿ.ಬೋರ್ಕಾರ್, ಎ.ಎನ್.ಎಂ. ಮತ್ತು ಶ್ರೀ ಗುರುಮಠ, ಚಾಲಕರು ರವರಿಗೆ ಅಕ್ರಮವಾಗಿ ಹೆಚ್ಚುವರಿ ವೇತನ ನೀಡಿರುವುದು. ಸದರಿ ಆರೋಪದ ಬಗ್ಗೆ ನಿಖರವಾದ ಮೊತ್ತವನ್ನು ತಿಳಿಸಿರುವುದಿಲ್ಲ. ಆದಾಗ್ಯೂ ಶ್ರೀ ವಿ.ಹೆಚ್. ಪೈ, ಇವರನ್ನು ಹೊರತುಪಡಿಸಿ, ಉಳಿದಿಬ್ಬರ ಬಗ್ಗೆ ಅಪಾದಿತರು ಅಕ್ರಮ ಎಸಗಿದ್ದಾರೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಕ್ಕೆ ಬಂದಿರುತ್ತಾರೆ.

**ಆರೋಪ:7** ಆಪಾದಿತರುಗಳು ಹಲವಾರು ನೌಕರರಿಗೆ ಎಲ್.ಟಿ.ಸಿ.ಮತ್ತು ಪ್ರವಾಸ ಭತ್ಯೆ ಮುಂಗಡ ನೀಡಿ ಸದರಿ ಮೊತ್ತವನ್ನು ಅಂತಿಮ ಬಿಲ್‌ನಲ್ಲಿ ಹೊಂದಾಣಿಕೆ ಮಾಡದೇ ರೂ. 16,050/– ನಷ್ಟ ಉಂಟು ಮಾಡಿರುತ್ತಾರೆ.

**ಆರೋಪ:8** ರೂ. 1,473/90 ಪ್ರವಾಸ ಮುಂಗಡ ಪಡೆದು ಈ ಬಗ್ಗೆ ಅಚಿತಿಮ ಹೊಂದಾಣಿಕೆ ಮಾಡದೇ ಇದ್ದುದರಿಂದ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವ ಆರೋಪವು ಸಾಬೀತಾಗಿರುತ್ತದೆ.

**ಆರೋಪ:9** ರೂ. 1,088/00 ರಜಾ ವೇತನವನ್ನು ಅನಧಿಕೃತವಾಗಿ ಶ್ರಿ ಕೆ.ಪಟಗಾರ ಎಂಬುವವರಿಗೆ ನೀಡಿ ಹಣ ದುರುಪಯೋಗ ಮಾಡಿರುವ ಆಪಾದನೆಯು ಸಾಬೀತಾಗಿರುವುದಾಗಿ ಅಭಿಪ್ರಾಯ ಪಡೆಯಲಾಗಿದೆ.

**ಆರೋಪ:10** ರೂ. 107/15 ಪೈಸೆ ಮತ್ತು ರೂ. 200/– ನ್ನು ನಗದು ಪುಸ್ತಕದಲ್ಲಿ ತೋರಿಸದೇ ದುರುಪಯೋಗವಾಗಿರುವುದು ಸಾಬೀತಾಗಿದೆ.

**ಆರೋಪ:11** ಆಪಾದಿತರು ರೂ. 9,000 ಗಳನ್ನು ಬಿಡ್ಡುದಾರರಾದ ಶ್ರಿ ವಿ.ಕೆ.ಕೊಡಕ್ಕಣಿ ಅವರಿಂದ ಪಡೆದು ಇದನ್ನು ದುರುಪಯೋಗಪಡಿಸಿಕೊಂಡಿರುತ್ತಾರೆ ಎಂಬ ಆರೋಪವು ಸಾಬೀತಾಗಿರುತ್ತದೆ.

**ಆರೋಪ:12** ಸಾರ್ವಜನಿಕರಿಗೆ ವೈದ್ಯಕೀಯ ಪ್ರಮಾಣ ಪತ್ರ ನೀಡಲು ವಸೂಲು ಮಾಡಿದ ಹಣದಲ್ಲಿ ಶೇಕಡ 50 ರಷ್ಟು ಸರ್ಕಾರಕ್ಕೆ ಜಮಾ ಮಾಡಬೇಕಾದ ರೂ.47/50 ದುರುಪಯೋಗ ಆಗಿದೆಯೆಂಬ ಆರೋಪವು ಸಾಬೀತಾಗಿರುತ್ತದೆ.

**ಆರೋಪ:13** ಆಪಾದಿತರು ರೂ. 8,483/76 ಹುಂಡಿಗಳನ್ನು (ಡಿ.ಡಿ.) ಸಾರ್ವಜನಿಕರಿಂದ ಪಡೆದು 5 ವರ್ಷಗಳ ತನಕ ಸದರಿ ಹುಂಡಿಗಳನ್ನು ಖಜಾನೆಗೆ ತುಂಬದೇ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವ ಆರೋಪವು ಸಂಪೂರ್ಣವಾಗಿ ಸಾಬೀತಾಗಿದೆ.

**ಆರೋಪ:14** ಆಪಾದಿತರು ತನ್ನ ಕೈಕೆಳಗೆ ಕೆಲಸ ಮಾಡುವ ನೌಕರರ ಸೇವಾ ಪುಸ್ತಕವನ್ನು ಸರಿಯಾಗಿ ನಿರ್ವಹಣೆ ಮಾಡದೇ ಕರ್ತವ್ಯಲೋಪ ಎಸಗಿರುವುದು ಸಾಬೀತಾಗಿದೆ.

**ಆರೋಪ:15** ಅದೇ ರೀತಿ ಆಪಾದಿತರು Bank Draft Register, Advance Recovery Register, and Service Register ಗಳನ್ನು ಆರ್ಥಿಕ ಸಂಹಿತೆ ಪ್ರಕಾರ ಕ್ರಮಬದ್ಧವಾಗಿ ನಿರ್ವಹಣೆ ಮಾಡದೇ ದುರ್ನಡತೆ ಎಸಗಿದ್ದಾರೆ ಎಂಬುದು ಸಂಪೂರ್ಣವಾಗಿ ಸಾಬೀತಾಗಿದೆ.

**ಆರೋಪ:16** ಅಪಾದಿತರು ಎನ್.ಎಸ್.ಸಿ. ಗಳನ್ನು ಖರೀದಿಸಿ, ಅವುಗಳನ್ನು ಕ್ರಮಬದ್ಧವಾಗಿ ರಿಜಿಸ್ಟರ್‌ಗಳಲ್ಲಿ ದಾಖಲೆ ಮಾಡದೇ ದುರ್ನಡತೆ ಎಸಗಿದ್ದಾರೆ ಎಂಬುದು ಸಾಬೀತಾಗಿದೆ.

**ಆರೋಪ:17** ಆಪಾದಿತರು ಅಧಿಕ ಮೊತ್ತದ ಹಣವನ್ನು ಎ.ಸಿ.ಬಿಲ್ ಮೂಲಕ ಪಡೆದು, ನಂತರ ಡಿ.ಸಿ.ಬಿಲ್ ಸಲ್ಲಿಸಿ ಲೆಕ್ಕ ಚುಕ್ತಾ ಮಾಡದೇ ಕರ್ನಾಟಕ ಆರ್ಥಿಕ ಸಂಹಿತೆ ನಿಯಮ–57 ನ್ನು ಉಲ್ಲಂಘಿಸಿರುವ ಆರೋಪವು ಸಾಬೀತಾಗಿದೆ.

**ಆರೋಪ:18** ಹೆರಿಗೆ ಭತ್ಯೆಯನ್ನು ಸಂಬಂಧಪಟ್ಟವರಿಗೆ ಪಾವತಿ ಮಾಡುವ ಸಂದರ್ಭದಲ್ಲಿ, ಸದರಿ ಮೊತ್ತದಲ್ಲಿ ರೂ. 20.00 ಗಳನ್ನು ಉಳಿಸಿಕೊಂಡು ಅಧಿಕಾರ ದುರುಪಯೋಗ ಮಾಡಿದ್ದಾರೆ ಎಂಬ ಆರೋಪವು ಸಂಪೂರ್ಣವಾಗಿ ಸಾಬೀತಾಗಿದೆ.

**ಆರೋಪ:19** ಆಪಾದಿತರು ಸರ್ಕಾರಿ ನೌಕರರಿಗೆ ಸಲ್ಲದ ದುರ್ನಢತೆಯನ್ನು ಎಸಗಿ, ಮೇಲಾಧಿಕಾರಿಗಳ ಆದೇಶವನ್ನು ಧಿಕ್ಕರಿಸಿರುತ್ತಾರೆ. ಆಪಾದಿತರು ಕರ್ನಾಟಕ ಆರ್ಥಿಕ ಸಂಹಿತೆ ನಿಯಮಗಳನ್ನು ಗಾಳಿಗೆ ತೂರಿ ತನ್ನ ಇಚ್ಛಾನುಸಾರ ಸರ್ಕಾರಿ ಹಣವನ್ನು ದುರುಪಯೋಗ ಮಾಡಿರುತ್ತಾರೆ ಎಂಬ ಆರೋಪವು ಸಾಬೀತಾಗಿರುತ್ತದೆ.

ಮೇಲ್ಕಂಡ ಆರೋಪಗಳಲ್ಲಿ ನಮೂದಿಸಿದ ಮೊತ್ತವನ್ನು ಲೆಕ್ಕ ಹಾಕಿದ್ದಲ್ಲಿ ಆಪಾದಿತರು ಒಟ್ಟು ರೂ. 2,52,786/66 ಸರ್ಕಾರಿ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ಲೋಕಾಯುಕ್ತ ವಿಚಾರಣೆಯಿಂದ ಸಾಬೀತಾಗಿದೆ. ಆರೋಪಿತರಲ್ಲಿ ಒಬ್ಬರಾದ ಡಾ:

ಎಸ್.ಎನ್.ಬೀಡಿ ಇವರು ದಿನಾಂಕ: 31/5/1999 ರಂದು ಈಗಾಗಲೇ ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿರುತ್ತಾರೆ. ಮತ್ತು ಪ್ರಥಮ ದರ್ಜೆ ಸಹಾಯಕರಾದ ಶ್ರೀ ಎಂ.ಕೆ.ನಾಯ್ಕ ಇವರು ಪ್ರಸ್ತುತ ಸೇವೆಯಲ್ಲಿದ್ದು ದಿನಾಂಕ: 30/4/2008 ರಂದು ವಯೋ ನಿವೃತ್ತರಾಗಲಿದ್ದಾರೆ. ಈಗ ಇವರು ಪ್ರಾ.ಆ.ಕೇಂದ್ರ, ಕಡೂರ, ಹಿರೇಕೆರೂರು ತಾ: ಹಾವೇರಿ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಇದೊಂದು ಸರ್ಕಾರಿ ಹಣ ದುರುಪಯೋಗ ಗಂಭೀರ ಆರೋಪವಾಗಿರುವುದರಿಂದ ಹಾಗೂ ಆಪಾದಿತರ ಮೇಲೆ ಮಾಡಿರುವ ಎಲ್ಲಾ ಆರೋಪಗಳು ಸಂಪೂರ್ಣವಾಗಿ ಸಾಬೀತಾಗಿರುವುದರಿಂದ ಈ ಇಬ್ಬರೂ ಆಪಾದಿತರುಗಳಿಂದ ದುರುಪಯೋಗವಾದ ಎಲ್ಲಾ ಮೊತ್ತವನ್ನು ಸಮಾನವಾಗಿ ವಸೂಲು ಮಾಡಬೇಕಾಗುತ್ತದೆ. ವಿಚಾರಣಾಧಿಕಾರಿಗಳು ಸಹ ಈ ಇಬ್ಬರೂ ಸಮಾನವಾಗಿ (Jointly and severally responsible) ಜವಾಬ್ದಾರರಾಗಿರುತ್ತಾರೆ ಎಂಬ ಅಭಿಪ್ರಾಯಕ್ಕೆ ಬಂದಿರುತ್ತಾರೆ. ಒಬ್ಬೊಬ್ಬರಿಂದ ತಲಾ ರೂ. 1,26,393/33 ಗಳನ್ನು ವಸೂಲಿ ಮಾಡಬೇಕಾಗಿದೆ. ಆದುದರಿಂದ ಪ್ರಕರಣದ ಗಂಭೀರತೆಯನ್ನು ಪರಿಗಣಿಸಿ ಈ ಕೆಳಕಂಡಂತೆ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿದೆ.

1. ಡಾ: ಎಸ್.ಎನ್.ಬೀಡಿ, ನಿವೃತ್ತ ವೈದ್ಯಾಧಿಕಾರಿ ಇವರ ಬಗ್ಗೆ ಕ.ನಾ.ಸೇ.ನಿಯಮಾವಳಿ ನಿಯಮ 214 ರಡಿಯಲ್ಲಿ ನಿವೃತ್ತಿ ವೇತನದಲ್ಲಿ ಶೇಕಡ 40 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ಆದೇಶ ಹೊರಡಿಸಲು ತೀರ್ಮಾನಿಸಿದೆ. ಹಾಗೂ ಇವರಿಂದ ಸರ್ಕಾರಕ್ಕೆ ನಷ್ಟವಾದ ರೂ. 1,26,393/33 ನ್ನು ಇವರ ಡಿ.ಸಿ.ಆರ್.ಜಿ. ಮತ್ತು ರಜೆ ನಗದೀಕರಣದಿಂದ ಸರಿದೂಗಿಸಲು ಹಾಗೂ ಇನ್ನೂ ಕಡಿಮೆ ಬಿದ್ದಲ್ಲಿ ಸಿವಿಲ್ ದಾವೆ ಹೂಡಿ ವಸೂಲಿ ಮಾಡಲು ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕು.ಕ.ಅಧಿಕಾರಿಗಳಿಗೆ ಆದೇಶ ನೀಡಲು ತೀರ್ಮಾನಿಸಿದೆ.
2. ಆಪಾದಿತ ನೌಕರರಾದ ಶ್ರೀ ಎಂ.ಕೆ.ನಾಯ್ಕ, ಪ್ರಥಮ ದರ್ಜೆ ಸಹಾಯಕ, ಪ್ರಸ್ತುತ ಪ್ರಾ.ಅ.ಕೇಂದ್ರ, ಕಡೂರು, ಹಿರೇಕೆರೂರು ತಾಲ್ಲೂಕು, ಹಾವೇರಿ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸುವ ಆದೇಶ ಹೊರಡಿಸುವುದು. ಹಾಗೂ ಅವರಿಂದ ಸರ್ಕಾರಕ್ಕೆ ನಷ್ಟ ಉಂಟಾದ ಮೊತ್ತ ರೂ. 1,26,393/33 ನ್ನು ಇವರ ಡಿ.ಸಿ.ಆರ್.ಜಿ. ಮತ್ತು ರಜೆ ನಗದೀಕರಣದಿಂದ ವಸೂಲು ಮಾಡಲು ಸಂಬಂಧಪಟ್ಟ ಜಿಲ್ಲಾ ಆಕುಕ.ಅಧಿಕಾರಿಗಳಿಗೆ ಅದೇಶ ನೀಡಲು ತೀರ್ಮಾನಿಸಿದೆ. ಶ್ರೀ ಎಂ.ಕೆ.ನಾಯ್ಕ, ಪ್ರಥಮ ದರ್ಜೆ ಸಹಾಯಕ ಅವರಿಗೆ ಸಂಬಂಧಿಸಿರುವಂತೆ ಆದೇಶ ಹೊರಡಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ:ಆಕುಕ 126 ಎಂಎಸ್ಎ 88, ಬೆಂಗಳೂರು ದಿನಾಂಕ: 20ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಆಪಾದಿತ ಅಧಿಕಾರಿ/ ನೌಕರರಾದ ಡಾ: ಎಸ್.ಎನ್.ಬೀಡಿ, ನಿವೃತ್ತ ವೈದ್ಯಾಧಿಕಾರಿ ಮತ್ತು ಶ್ರೀ ಎಂ.ಕೆ.ನಾಯ್ಕ್, ಪ್ರಥಮ ದರ್ಜೆ ಸಹಾಯಕ, ಇವರುಗಳಿಗೆ ಈ ಕೆಳಕಂಡ ದಂಡನೆ ವಿಧಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು | ವಿಧಿಸಿರುವ ದಂಡನೆ |
|---|---|---|
| 1) | ಡಾ: ಎಸ್.ಎನ್.ಬೀಡಿ, ನಿವೃತ್ತ ವೈದ್ಯಾಧಿಕಾರಿ. | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ, ನಿಯಮ–214 ರಡಿಯಲ್ಲಿ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವ ಮೊತ್ತ ರೂ. 1,26,393/33 (ಒಂದು ಲಕ್ಷದ ಇಪ್ಪತ್ತಾರು ಸಾವಿರದ ಮೂರು ನೂರ ತೊಂಭತ್ತ ಮೂರು ಮತ್ತು ಮೂವತ್ತ ಮೂರು ಪೈಸೆಗಳು ಮಾತ್ರ) ನಿವೃತ್ತ ವೈದ್ಯಾಧಿಕಾರಿಯ ಡಿ.ಸಿ.ಆರ್.ಜಿ. ಮತ್ತು ರಜೆ ನಗದೀಕರಣದಿಂದ ವಸೂಲಿ ಮಾಡುವುದು. ಇನ್ನು ಕಡಿಮೆ ಬಿದ್ದಲ್ಲಿ ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕು.ಕ.ಅಧಿಕಾರಿಗಳು ಸಿವಿಲ್ ದಾವೆ ಹೂಡಿ ವಸೂಲಿ ಮಾಡಲು ಆದೇಶಿಸಿದೆ. ಮತ್ತು ಸದರಿ ವೈದ್ಯಾಧಿಕಾರಿ ಪಡೆಯುತ್ತಿರುವ ವಿಶ್ರಾಂತಿ ವೇತನದಲ್ಲಿ ಶೇಕಡ 40 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವುದು. |
| 2) | ಶ್ರೀ ಎಂ.ಕೆ.ನಾಯ್ಕ್, ಪ್ರಥಮ ದರ್ಜೆ ಸಹಾಯಕ. | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ 8(vi) ರಡಿಯಲ್ಲಿ 8(vi) ಕಡ್ಡಾಯವಾಗಿ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ನಿವೃತ್ತಿಗೊಳಿಸಲಾಗಿದೆ. ಹಾಗೂ ಸದರಿಯವರಿಂದ ದುರುಪಯೋಗವಾಗಿರುವ ಸರ್ಕಾರದ ಹಣ ರೂ. 1,26,393/33 (ಒಂದು ಲಕ್ಷದ ಇಪ್ಪತ್ತಾರು ಸಾವಿರದ ಮೂರು ನೂರ ತೊಂಭತ್ತ ಮೂರು ಮತ್ತು ಮೂವತ್ತ ಮೂರು ಪೈಸೆಗಳು ಮಾತ್ರ) ಗಳನ್ನು ಅವರ ಡಿ.ಸಿ.ಆರ್.ಜಿ. ಮತ್ತು ರಜೆ ನಗದೀಕರಣದಿಂದ ವಸೂಲಿ ಮಾಡಿ ಸರ್ಕಾರಕ್ಕೆ ಭರಿಸಲು ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕು.ಕ.ಅಧಿಕಾರಿಗಳಿಗೆ ಆದೇಶಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1548

**ಆ್ಯಂಟನಿ ಮೆಂಡೋನ್ಸಾ**

ಸರ್ಕಾರದ ಉಪ ಕಾರ್ಯದರ್ಶಿ–1,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.